Kein Vogel übertrifft die Nachtigall an Lieblichkeit des Gesanges.

# The Heart Book

## IN CANARESE.

SIXTH EDITION.

# ಹೃದಯದರ್ಪಣ.

ಆರನೇ ಛಾಪೆ.



MANGALORE:
PUBLISHED BY C. STOLZ,
BASEL MISSION BOOK & TRACT DEPOSITORY.
1869.

ಕ್ರಯ: ೧ ಆಣೆ.

# The Heart Book

## IN CANARESE.

SIXTH EDITION.

# ಹೃದಯದರ್ಪಣ.

ಆರನೇ ಛಾಪೆ.

**MANGALORE:**

PRINTED BY STOLZ & REUTHER, BASEL MISSION PRESS.

1869.

# ಪೀಠಿಕೆ.

ಈ ಪುಸ್ತಕದಲ್ಲಿರುವ ಚಿತ್ರಗಳು ದೇವರ ಆಲಯವಾಗಿರುವ ಹೃದಯವನ್ನೂ ಸೈತಾನನ ವಾಸಸ್ಥಳವಾದ ಹೃದಯವನ್ನೂ ಬೇರೆ ಬೇರೆಯಾಗಿ ತೋರಿಸುತ್ತವೆ.

ಹತ್ತು ವಿಧದ ಚಿತ್ರಗಳು ಉಂಟು. ಒಂದೊಂದರಲ್ಲಿ ಒಂದು ಮುಖವು ಒಂದು ಹೃದಯವು ಬರದದೆ.

ಮನುಷ್ಯನ ಮುಖವನ್ನು ಬುದ್ಧಿಯಿಂದ ದೃಷ್ಟಿಸಿ ನೋಡಿದರೆ, ಅವನ ಸುಗುಣ ದುರ್ಗುಣಗಳನ್ನು ಸ್ವಲ್ಪವಾದರೂ ಊಹಿಸ ಬಹುದು. ಆದರೆ ಮನುಷ್ಯನ ಹೃದಯವನ್ನು ಮನುಷ್ಯನು ನೋಡಲಾರನು. ಹೃದಯವನ್ನು ಹಲಸಿನ ಹಣ್ಣಿನ ಹಾಗೆ ಬಿಚ್ಚಿ ನೋಡ ಕೂಡದು.

ದೇವರ ವಾಕ್ಯದಲ್ಲಿ ಹೃದಯದ ಎರಡು ವಿಧವಾದ ಗುಣಗಳು ಚನ್ನಾಗಿ ವರ್ಣಿಸಿ ಅವೆ. ದೇವರ ವಾಕ್ಯವನ್ನು ಓದಿ ಅಭ್ಯಾಸ ಮಾಡುವದರಿಂದ, ಮನುಷ್ಯನ ಹೃದಯದ ಭಾವವನ್ನು ಸತ್ಯದ ಪ್ರಕಾರ ತಿಳುಕೊಳ್ಳುವದು ಬಹಳ ಉ

ಪಯೋಗವಾಗಿದೆ. ಅನ್ಯರ ಹೃದಯವನ್ನು ತಿಳು ಕೊಳ್ಳು ವದು ಅರವತ್ತು ಗುಣ, ಸ್ವಂತ ಹೃದಯವನ್ನು ತಿಳುಕೊಳ್ಳು ವದು ಕೋಟಿ ಗುಣ.

ಹೃದಯವು ಮನೆಯ ಹಾಗಿದೆ. ಅದರಲ್ಲಿ ವಾಸಿಸುವ ವರ್ರ್‍ಯಾರೆಂದು ತಿಳಿಯದೆ ಇರ ಬಾರದು. ಅದು ಖಾಲಿ ಬೀಳುವ ಬಿಡದಿಯಲ್ಲ. ದೇವರ ಆತ್ಮವು ಅದರಲ್ಲಿ ವಾಸವಾಗದೆ ಇದ್ದರೆ, ಸೈತಾನನು ಅದರಲ್ಲಿ ಉಳು ಕೊಳ್ಳುತ್ತಾನೆ. ದೇವರ ಅತ್ಮವು ಅದರಲ್ಲಿ ಇದ್ದರೆ, ದಿವ್ಯ ಗುಣಗಳೆಂಬ ಪರಿವಾರವು ಆತ್ಮವೆಂಬ ಧೊರೆಯ ಸಂಗಡ ಇದ್ದು, ಸೇವಿಸುವದು. ಸೈತಾನನು ಅದರಲ್ಲಿ ಕೂತರೆ, ಷಡ್ವೈರಿಗಳು ಮೊದಲಾದ ಸೈತಾನನ ಗುಣಸಮೂಹವು ಯಜಮಾನನ ಬಿಡದಿಯಲ್ಲಿದ್ದು, ಗುಲ್ಲು ಎಬ್ಬಿಸುವದು. ಆದದರಿಂದ ತನ್ನ ಹೃದಯದಲ್ಲಿ ಯಾರು ಇರುತ್ತಾರೆಂದು ವಿಚಾರಿಸಿ ತಿಳುಕೊಳ್ಳುವದು ಬುದ್ಧಿವಂತನಿಗೆ ಯೋಗ್ಯವಾಗಿದೆ.

ಪ್ರತಿ ಮನುಷ್ಯನ ಹೃದಯದಲ್ಲಿ ದೇವರ ಮಕ್ಕಳ ಗುಣವು ಆಗಲಿ ಸೈತಾನನ ಮಕ್ಕಳ ಗುಣವು ಆಗಲಿ ಮೋಕ್ಷ ಇಲ್ಲವೆ ನರಕ ಪ್ರಾಪ್ತಿಸುವ ಲಕ್ಷಣಗಳ ಸಂಗಡ ಬೆಳಿಯುತ್ತವೆ. ಇದನ್ನು ನೆನಸಿ ಕೊಂಡು, ಈ ಚಿತ್ರಗಳನ್ನು ಜಾಗ್ರತೆಯಾಗಿ ಪರಾಮ್ಮರಿಸಿ ನೋಡ ಬೇಕು.



## V

ನನ್ನ ಯೇಸುವಾದು ಕೊಂಡೆ;
ಆತನತಿಪ್ರಿಯನೇ.
ಆತನಲ್ಲಿ ಹರ್ಷ ಗೊಂಡೆ;
ಆತ ಜೀವಜ್ಯೋತಿಯೇ.
ನನ್ನ ಆತ್ಮದಾಪ್ತನೆ,
ಯೇಸುವೆ, ವಾಸಿಸೆನ್ನ ಒಳಗೆ;
ಎನ್ನನೊಯ್ಯಿ ಮೇಲಕೆ!

ನನ್ನ ಯೇಸುವಾದು ಕೊಂಡೆ;
ಕ್ರಿಸ್ತ ಮೃತಿಯಿಂದಲೆ
ಪಾಪ ಪರಿಹಾರ ಗೊಂಡೆ;
ಭಯವಿಲ್ಲ ನನಗೆ.
ನನ್ನ ಆತ್ಮದಾಪ್ತನೆ,
ಯೇಸುವೆ, ವಾಸಿಸೆನ್ನ ಒಳಗೆ!
ಎನ್ನನೊಯ್ಯಿ ಮೇಲಕೆ!



# ೧. ಚಿತ್ರ.

ಸೈತಾನನು ಅಡ್ಡಿ ಇಲ್ಲದೆ ಆಳುವ ಹೃದಯವು.

ಈ ಮುಖ ನೋಡಿದರೆ, ಯಾವ ಸುಲಕ್ಷಣವೂ ಕಾಣುವದಿಲ್ಲ; ಯಾಕಂದರೆ ಪಾಪದ ಸೇವೆಯಿಂದ ಹುಟ್ಟುವ ಸುಖದುಃಖಗಳಿಂದ ಮುಖದ ಛಾಯೆಯು ಬದಲಾಗುವದು. ಪ್ರಪಂಚದವನಿಗೆ ಈ ಮುಖದ ವಿಧವು ಸಾಧಾರಣವಾಗಿ ಕಾಣುವದು; ಆದರೆ ಹೃದಯದ ಅಂತರಂಗದಲ್ಲಿ ಸೈತಾನನ ಸಿಂಹಾಸನವೂ ಆಡಳಿತವೂ ಇರುತ್ತವೆ. ಅಂಥ ಹೃದಯದ ಸ್ಥಿತಿಯನ್ನು ವಿವೇಕದಿಂದ ತಿಳುಕೊಳ್ಳುವಂಥವನೊಬ್ಬನು ಪ್ರಪಂಚದವನಿಗೆ ಅವನ ಹೃದಯದ ವಿದ್ಯಮಾನವನ್ನು ಇದ್ದಹಾಗೆ ತಿಳಿಸಿದರೆ, ಅವನು ಆ ಮಾತು ಮನಸ್ಸಿಗೆ ತಾರದೆ ನಗಾಡುವನು, ಅಥವಾ ಬೈಯುವನು; ಯಾಕಂದರೆ ಅವನು ತನ್ನ ಸ್ವಭಾವದ ಒಳಗುಟ್ಟನ್ನು ಇನ್ನೂ ತಿಳಿಯದೆ ಇದ್ದಾನೆ.

ಈ ಚಿತ್ರದಲ್ಲಿ ಸೈತಾನನ ಪರಿವಾರದವರೆಂಬ ದುರ್ಗುಣಗಳು ಸಪ್ತ ಮೃಗರೂಪಗಳಾಗಿ ಬರದವೆ. ಏನಂದರೆ ಹೃದಯದ ಮೇಲಿನ ಭಾಗದ ಬಲಗಡೆಯಲ್ಲಿ ಮೃಗರಾಜನಾದ ಸಿಂಹದ ರೂಪವೇನಂದರೆ: ಅಹಂಕಾರವೆಂಬ ಸಿಂಹವು ತನಗೆ ಸರಿಯಾದವರೂ ಶ್ರೇಷ್ಠರೂ ಯಾರೂ ಇಲ್ಲ, ತಾನೇ ದೊಡ್ಡದು, ಉಳಿದವರೆಲ್ಲರೂ ಕೀಳರು ಎಂದನ್ನುತ್ತದೆ; ಈ ದುರ್ಗುಣದಿಂದ ಹುಟ್ಟುವ ಕ್ರೋಧವನ್ನು ಸಿಂಹದ ಆಕಾರ ತೋರಿಸುತ್ತದೆ. ಅಹಂಕಾರಿಗೆ ಯಾವನಾದರೂ ಹಗೆ ಅಥವಾ ಅವಮಾನ ಮಾಡಿದರೆ, ತಾಳಲಾರದೆ ರೋಷದಿಂದ ಗರ್ಜಿಸುವ ಸಿಂಹದ ಹಾಗೆ ಅವನ ಮೇಲೆ ಬೀಳುವನು.

ಅದರ ಬುಡದಲ್ಲಿ ಮಂತ್ರಿಯಾದ ನರಿಯ ರೂಪವದೆ. ಅದು ಬಲಕ್ಕೆ ಅಸಾಧ್ಯವಾದದ್ದನ್ನು ಯುಕ್ತಿಯಿಂದ ಸಾಧಿಸುವದು. ನರಿಯು ಮೋಸಗಾರರೆಲ್ಲರಿಗೆ ಗುರುವಾಗಿರುತ್ತದಷ್ಟೇ. ಮನುಷ್ಯರಲ್ಲಿ ಬಹಳ ಸಾತ್ವಿಕರಿಗೆ ಸಿಂಹದ ಗುಣವಿಲ್ಲವೆಂದೂ, ಬಹಳ ಕ್ರೋಧಿಗಳಾದ ಗರ್ವಿಷ್ಟರಿಗೆ ನರಿಯ ಗುಣವಿಲ್ಲವೆಂದೂ, ನೆನಸ ಬಾರದು; ಈ ಎರಡು ದುಷ್ಟ ಮೃಗಗಳೆಂಬ ದುರ್ಗುಣಗಳು ಮನುಷ್ಯರ ಹೃದಯಗಳಲ್ಲಿ ಉಂಟು.

ಅದರ ಬುಡದಲ್ಲಿ ಸರ್ಪವು ಸುತ್ತಿ ಕೊಂಡು ಮಲಗಿದೆ. ಅದು ಯಾವದಕ್ಕೆ ಗುರುತು ಅಂದರೆ: ಮತ್ಸರಕ್ಕೆ. ಸರ್ಪವು

ಹಾಲನ್ನು ವಿಷ ಮಾಡುತ್ತದೆ. ಸೈತಾನನು ಮನುಷ್ಯರ ಆದಿ ತಂದೆತಾಯಿಗಳಿಗೆ ಮೋಸ ಮಾಡಿ, ಅವರನ್ನೂ ಅವರ ಮಕ್ಕಳನ್ನೂ ಪಾಪಕ್ಕೂ ಮರಣಕ್ಕೂ ಒಳ ಬೀಳಿಸ ಬೇಕೆಂದು, ಸರ್ಪವೇಷ ಧರಿಸಿ ಕೊಂಡು ಬಂದನು; ಯಾಕಂದರೆ ತಾನು ದುಃಖಭರಿತನಾಗಿರುವದರಿಂದ, ಮತ್ತೊಬ್ಬರು ಸುಖದಿಂದಿರ ಬಾರದೆಂದು, ಮನುಷ್ಯರು ದೇವರಿಗೆ ದ್ರೋಹ ಮಾಡುವ ಹಾಗೆ ಅವರ ಬುದ್ಧಿ ಕೆಡಿಸಿ, ಮೋಸದಿಂದ ಅವರನ್ನು ತನ್ನ ವಶ ಮಾಡಿ ಕೊಂಡು, ಪಾಪದ ವಿಷವನ್ನು ಅವರ ಸ್ವಭಾವದಲ್ಲಿ ಶೇರಿಸಿದನು. ಸೈತಾನನಿಗೆ ವಶವಾಗಿರುವ ಮನುಷ್ಯರೆಲ್ಲರು ಸತ್ಯಸುಖವಿಲ್ಲದವರಾಗಿರುವದರಿಂದ, ಮತ್ತೊಬ್ಬರು ಸಹಾ ದುಃಖ ಪಡ ಬೇಕೆಂಬ ಆಶೆಯು ಪಾಪಿಗಳ ಹೃದಯದಲ್ಲಿ ಬೇರೂರಿ ಅದೆ. ಅದರ ದೆಸೆಯಿಂದ ಕೊಲೆ ಮೊದಲಾದ ದ್ರೋಹಗಳು ಹುಟ್ಟುತ್ತವೆ. ಅದರ ದೆಸೆಯಿಂದಲೂ ಪ್ರಾಯದಲ್ಲಿಯೂ ಬುದ್ಧಿಯಲ್ಲಿಯೂ ಹೆಚ್ಚಿದವರು ಚಿಕ್ಕವರನ್ನು ಕೆಡಿಸಿ, ಬುದ್ಧಿಹೀನರಿಗೆ ದುರ್ಮಾರ್ಗವನ್ನು ಬೋಧಿಸುತ್ತಾರೆ. ಇದು ಮನುಷ್ಯರು ಮಾಡುವ ಎಲ್ಲಾ ಪಾಪಗಳಲ್ಲಿ ದೊಡ್ಡದಾಗಿದ್ದು, ಸೈತಾನನು ಮಾಡಿದ ಪಾಪಕ್ಕೆ ಸರಿಯಾಗಿದೆ.

ಇದರ ಬುಡದಲ್ಲಿ ಹೆಗ್ಗಣದ ರೂಪವದೆ. ಅದರ ಗುಣ ಯಾವದಂದರೆ: ತಾನು ಕಷ್ಟ ಮಾಡದೆ, ಕಷ್ಟ ಮಾಡುವ

ವರು ಘಳಿಸಿ ಇಟ್ಟು ಕೊಂಡದ್ದನ್ನು ಕದ್ದು ನೆಲದಲ್ಲಿ ಹೂಳಿಡುತ್ತದೆ. ಆದದರಿಂದ ಹೆಗ್ಗಣವು ಮೈಗಳ್ಳತನ ಚೋರತ್ವ ದ್ರವ್ಯಾಶೆಗಳ ಗುರುತು ಆಗಿಯದೆ. ಈ ದುರ್ಗುಣಗಳು ಸಹಾ ಪಾಪದಿಂದ ಕೆಟ್ಟು ಹೋದ ನರಭಾವಕ್ಕೆ ಸಹಜವಾಗಿವೆ. ತಮ್ಮನ್ನು ತಾವು ತಿಳಿಯದವರು ಈ ದೋಷಗಳು ತಮ್ಮ ಭಾವದಲ್ಲಿ ಇಲ್ಲವೇ ಇಲ್ಲವೆಂದು ನೆನಸುವರು.

ನಾಯಿಗೆ ಶುದ್ಧಾಶುದ್ಧವೆಂಬ ಭೇದವಿಲ್ಲ. ಯಾವದಾದರೂ ನೆಕ್ಕುವದು, ಕಂಡವರ ಮೇಲೆ ಬೊಗಳಿ ಬೀಳುವದು, ಕಂಡವರ ಸಂಗಡ ಆಡುವದು, ಎಲ್ಲ್ಯಾದರೂ ಮಲಮೂತ್ರ ಬಿಡುವದು, ಕಾರಿದ್ದನ್ನು ತಿನ್ನುವದು, ಈ ಗುಣಗಳು ಮನುಷ್ಯನ ಹೃದಯದಲ್ಲಿ ಅವೆ; ಹ್ಯಾಗಂದರೆ ಭಕ್ತಿ ಇಲ್ಲದ ಮನುಷ್ಯನ ಹೃದಯವು ದೇವರ ಚಿತ್ತವನ್ನೂ ವಾಕ್ಯವನ್ನೂ ಮಾರ್ಗವನ್ನೂ ಉದಾಸೀನ ಮಾಡಿ, ಶುದ್ಧವಾದದ್ದನ್ನು ಚೇಷ್ಟೆಯ ಮಾತಿನಿಂದ ಅಶುದ್ಧ ಮಾಡಿ, ನೀತಿಯನ್ನು ನಿರಾಕರಿಸಿ, ಸತ್ಯವನ್ನು ಅಸತ್ಯ ಮಾಡಿ ಕಲಸುತ್ತದೆ.

ಹದ್ದು ಶವವನ್ನು ದೂರದಿಂದ ಮೂಸಿ ನೋಡಿ, ಫಕ್ಕನೆ ಹಾರಿ ಬಂದು, ಅದರ ಮೇಲೆ ಬಿದ್ದು, ಕಂಠಪೂರ್ತಿಯಾಗಿ ತಿನ್ನುತ್ತದೆ. ಬೇಟೆಗಾರರು ಬಂದು ಗುಂಡು ಹೊಡದರೂ ಶವವನ್ನು ಬಿಡುವದಿಲ್ಲ. ಮನುಷ್ಯರು ಸಹಾ ಇದರ ಹಾಗೆ

ಹೊಟ್ಟೆಹೊರಕರಾಗಿದ್ದಾರೆ. ಊಟಕ್ಕೆ ಇದ್ದರೆ, ಬೇರೆ ಯೋಚನೆ ಇಲ್ಲ. ಹೊಟ್ಟೆಯೇ ಪರವಸ್ತುವು. ಗ್ರಾಸವನ್ನು ಮೂಸಿ ನೋಡಿ, ಶಿಕ್ಕಿದ್ದೆಲ್ಲಾ ನುಂಗಿ, ಜೀವ ಹೋದರೂ ಕಚ್ಚಿದ್ದನ್ನು ಬಿಡುವದಿಲ್ಲ. ಹಸಿದವರು ಯಾವ ಪಾಪವನ್ನಾದರೂ ಮಾಡುವರು.

ಆನೆ ಸಹ ಮನುಷ್ಯನ ಹೃದಯದಲ್ಲಿ ಇರುವದೋ? ಅಂದರೆ, ಕಾಮವೆಂಬ ಮದ್ದಾನೆ ಅದರಲ್ಲಿ ವಾಸಿಸುವದೆಂಬದಕ್ಕೆ ಸಂಶಯವಿಲ್ಲ. ಮದ ಹತ್ತಿದ ಆನೆಗಿಂತ ಭಯಂಕರವಾದ ಮೃಗ ಯಾವದೂ ಇಲ್ಲ. ಅದೇ ಪ್ರಕಾರ ಮೋಹ ತುಂಬಿದ ಮನುಷ್ಯನ ಭಾವ ಕಡು ಕೆಟ್ಟದ್ದು. ಮನುಷ್ಯನ ಹೃದಯವೆಂಬ ಅಡವಿಯಲ್ಲಿ ಕಾಮ ಮೋಹ ಮೊದಲಾದ ಪಾಪಗಳೆಂಬ ಮೃಗಗಳು ಭಯಂಕರವಾಗಿರುತ್ತವೆ. ದೇವರು ಮನುಷ್ಯರಲ್ಲಿ ಮದುವೆಯ ನೇಮವನ್ನು ಸ್ಥಾಪಿಸಿ, ಅದು ಪರಿಶುದ್ಧವಾಗಿರ ಬೇಕೆಂದು, ಆಜ್ಞಾಪಿಸಿದ್ದಾನೆ. ಆದರೆ ಮನುಷ್ಯರು ದೇವರ ನೇಮವನ್ನು ಮೀರಿ, ಮನಸ್ಸಿಗೆ ಬಂದ ಹಾಗೆ ನಡದು ಕೊಳ್ಳುತ್ತಾರೆ. ಗಂಡಸರು ಅನೇಕ ಹೆಂಡರನ್ನು ಮದುವೆ ಮಾಡಿ ಕೊಳ್ಳುತ್ತಾರೆ. ಹೆಂಗಸರು ಅನೇಕ ಗಂಡಂದಿರನ್ನು ಮದುವೆ ಮಾಡಿ ಕೊಳ್ಳುತ್ತಾರೆ. ಇದಲ್ಲದೆ ಬೇರೆ ನಾನಾ ವಿಧವಾದ ಹಾದರವು ಜನರಲ್ಲಿ ನಡವಡಿಕೆಯಾ

ಗಿದೆ. ವ್ಯಭಿಚಾರ ಜಾರತ್ವ ಮೊದಲಾದ ಪಾಪಗಳನ್ನು ಮಾಡದೆ ಇರುವವರಾದರೂ ಅಂಥಾ ಆಲೋಚನೆಯನ್ನು ಅಂಗೀಕರಿಸಿ, ಶೃಂಗಾರಪದಗಳನ್ನು ಹಾಡಿ, ಕಾಮಚೇಷ್ಟೆಯ ಮಾತು ಆಡುತ್ತಾರೆ. ಐಯ್ಯೋ! ಈ ಕೆಟ್ಟ ಅಡವಿಯಲ್ಲಿ ಸಿಂಹಗಳೂ ಆನೆಗಳೂ ಅತಿ ಪ್ರಬಲವಾಗಿವೆ. ಚಿತ್ರದಲ್ಲಿ ಬರದ ಏಳು ಮೃಗದ ಹೊರ್ತು, ಹೃದಯವೆಂಬ ಅಡವಿಯಲ್ಲಿ ಲೆಖ್ಖವಿಲ್ಲದ ಮೃಗಗಳು ತಿರುಗಾಡುತ್ತವೆ. ಅವುಗಳನ್ನೆಲ್ಲಾ ಚಿತ್ರದಲ್ಲಿ ಬರದು ತೋರಿಸುವದು ಅಸಾಧ್ಯವು. ದೀಪದ ಸುತ್ತಲೂ ಹಾರ್‍ಯಾಡುವ ಪತಂಗ, ಕತ್ತಲೆ ಕೋಣೆಯಲ್ಲಿ ಸುಳಿದಾಡುವ ಕೀಚ, ಬಾಲಿನ ಹಕ್ಕಿ, ಹಾರ್‍ಯಾಟದ ಕಪಿ, ಬೆಳಕು ಸೈರಿಸದ ಗೂಗೆ ಇತ್ಯಾದಿ ಅನೇಕ ಪ್ರಾಣಿಗಳು ಮನುಷ್ಯನ ಹೃದಯವೆಂಬ ಅಡವಿಯಲ್ಲಿ ತುಂಬಿಯವೆ. ಈ ಪ್ರಾಣಿಗಳೆಲ್ಲವು ಸೈತಾನನಿಗೆ ವಶವಾಗಿ, ಅವನ ದುರಾಲೋಚನೆಗಳನ್ನು ಮನುಷ್ಯನ ಹೃದಯದಲ್ಲಿ ಪೂರೈಸುತ್ತಾ ತಿರುಗಾಡುತ್ತವೆ. ದೇವರ ಆತ್ಮವು ಬಹಳ ಇಚ್ಛೆ ಮಾಡಿದರೂ, ಮನುಷ್ಯನ ಹೃದಯದಲ್ಲಿ ಶೇರ ಕೂಡದು; ಯಾಕಂದರೆ, ಹೃದಯವು ಅಶುದ್ಧತ್ವದಿಂದ ತುಂಬಿರುವ ಪರ್ಯಂತರ, ಪರಿಶುದ್ಧ ಆತ್ಮಕ್ಕೆ ಅದರಲ್ಲಿ ಇಂಬು ಶಿಕ್ಕುವದಿಲ್ಲ.

ಈ ಚಿತ್ರದಲ್ಲಿ ಬರದ ಪಾರಿವಾಳವು ಪರಿಶುದ್ಧಾತ್ಮದ ಗು

ರ್ತಾಗಿದೆ. ಮೊದಲನೇ ಚಿತ್ರದಲ್ಲಿ ಅದು ಹೃದಯದ ಹೊರಗಡೆಯಲ್ಲಿದೆ; ಪರಿಶುದ್ಧಾತ್ಮವು ಹೊರಗೆ ಇರುವ ಸಮಯದಲ್ಲಿಯಾದರೂ, ಅಗ್ನಿಜ್ವಾಲೆಗಳನ್ನು ಹೃದಯದ ಮೇಲೆ ಸುರಿಸಿ, ಪಾಪದ ತಿಳುವಿಕೆಯಿಂದ ಉಂಟಾಗುವ ಪಶ್ಚಾತ್ತಾಪದ ಭಾವನೆಗಳನ್ನು ಹುಟ್ಟಿಸುತ್ತದೆ.

ಮತ್ತು ಒಂದು ನಕ್ಷತ್ರವು ಹೃದಯದಲ್ಲಿರುವ ಪ್ರಕಾರ ಕಾಣುವದು. ಅದು ಏನಂದರೆ: ಇನ್ನು ಗುಣವಾಗುವದು, ಇನ್ನು ದೇವರ ಕೃಪೆಯು ದೊರಕುವದು ಎಂಬ ಆಶೆಯ ಗುರ್ತಾಗಿದೆ. ಈ ಆಶೆಯು ಮಂದವಾಗಿರುವದರಿಂದ, ಆ ನಕ್ಷತ್ರಕ್ಕೆ ಕಾಂತಿ ಇಲ್ಲ.

ಇದಲ್ಲದೆ ಬಲಗಡೆಯಲ್ಲಿ ದೂತನೊಬ್ಬನು ನಿಂತು, ಮನುಷ್ಯನ ಕಿವಿಯಲ್ಲಿ ಮೆಲ್ಲಗೆ ಆಯಾ ಸತ್ಯದ ವಾಕ್ಯಗಳನ್ನೂ ದೇವರ ಕೃಪೆಯ ಬೋಧನೆಗಳನ್ನೂ ಹೇಳುತ್ತಾನೆ. ಆದರೆ ಪಾಪದ ಸಮುದ್ರದಲ್ಲಿ ಮುಣುಗಿದ ಮನುಷ್ಯನ ಮನಸ್ಸು ದೂತನ ಮಾತುಗಳಲ್ಲಿ ಲಕ್ಷ್ಯವಿಡುವದಿಲ್ಲ. ಪ್ರಪಂಚದ ಮನುಷ್ಯನ ಸ್ವಭಾವವು ಇಂಥಾದ್ದಾಗಿದೆ. ಸಮೂಹದವರು ಇಂಥವರಾಗಿದ್ದು, ಬೇರೆ ಬೇರೆ ಮತಗಳೆಂಬ ಅನೇಕ ಹಾದಿಗಳಿಂದ ನರಕಕ್ಕೆ ಹೋಗುತ್ತಾರೆ.



## ಪ್ರಾರ್ಥನೆಯು.

ಕರುಣ ಕಟಾಕ್ಷಗಳುಳ್ಳ ದೇವರೇ, ಪಾಪದಿಂದ ತುಂಬಿರುವ ಈ ಹೃದಯದ ಮೇಲೆ ಕೃಪೆಯ ಕಿರಣವನ್ನು ಹರಿಸು. ನಿನ್ನ ದಿವ್ಯ ಪ್ರಕಾಶದಿಂದ ನನ್ನ ಪಾಪಕತ್ತಲೆಯನ್ನು ಬೆಳಗಿಸು. ನನ್ನ ಸ್ವಂತ ಹೃದಯವನ್ನು ನನಗೆ ಪ್ರಸಿದ್ಧ ಮಾಡು. ನರಮೃಗವಾದೆನು. ಪೂರ್ಣ ದಯೆಯಿಂದ ನನ್ನನ್ನು ಮನುಷ್ಯನಾಗ ಮಾಡು. ಸೈತಾನನನ್ನೂ ಅವನ ಪರಿಚಾರಕರನ್ನೂ ನನ್ನ ಹೃದಯದಿಂದ ಹೊರಡಿಸಿ, ನೀನು ನಿನಗೋಸ್ಕರ ನಿರ್ಮಿಸಿದ ಆತ್ಮದ ಆಲಯವನ್ನು ಸಾರಿಸಿ ಶುದ್ಧ ಮಾಡು. ಸತ್ಯವಾದ ಪುಣ್ಯವನ್ನು ಕೊಟ್ಟು, ನನ್ನ ಹೃದಯದಲ್ಲಿ ಪ್ರವೇಶಿಸಿ, ಅದನ್ನು ಪರಿಶುದ್ಧ ದೇವಾಲಯವಾಗುವ ಹಾಗೆ ಮಾಡು.



# ೨. ಚಿತ್ರ.

### ಮಾನಸಾಂತರದ ಆರಂಭ.

ಈ ಚಿತ್ರದಲ್ಲಿ ಬಲಗೈಯಿಂದ ಖಡ್ಗವೆತ್ತಿ, ಎಡಗೈಯಲ್ಲಿ ತಲೆಬುರುಡೆ ಹಿಡಿದು ಕೈಚಾಚಿ ತೋರಿಸುವ ದೇವದೂತನ ಅಭಿ



ಪ್ರಾಯವೇನಂದರೆ: ಮರಣ ಸಮೀಪವದೆ ಎಂದು ಎಚ್ಚರಿಸಿ, ಮರಣದ ಬಳಿಕ ಕಠಿಣವಾದ ನ್ಯಾಯತೀರ್ವಿಕೆಯಾಗುವದೆಂದು, ಮನುಷ್ಯನಿಗೆ ಸಂಜ್ಞೆ ಮಾಡುವ ದೇವರ ಕೃಪೆಯು. ದೇವರ ಕಡೆಯಿಂದ ಮನುಷ್ಯನಿಗೆ ಬರುವ ಕೃಪೆಯ ಮಾತು ಯಾವದಂದರೆ: ನಿನ್ನ ಕಾಠಿಣ್ಯದ ಪ್ರಕಾರವಾಗಿಯೂ, ಮಾನಸಾಂತರವಿಲ್ಲದ ನಿನ್ನ ಹೃದಯದ ಪ್ರಕಾರವಾಗಿಯೂ, ದೇವರ ನೀತಿಯಾದ ತೀರ್ವಿಕೆ ಪ್ರಕಟವಾಗುವಂಥ ಕೋಪದ ದಿವಸಕ್ಕೆ ನಿನಗೆ ನೀನೇ ಕೋಪವನ್ನು ಕೂಡಿಸಿರುವದು ಯಾಕೆ? ದೇವರು ಒಬ್ಬೊಬ್ಬನಿಗೆ ಅವನವನ ಕ್ರಿಯೆಗಳ ಪ್ರಕಾರ ಮುಯ್ಯಿ ಕೊಡುವನು; ಸತ್ಕರ್ಮದಲ್ಲಿ ತಾಳಿ ಕೊಂಡು ಮಹಿಮೆಯನ್ನೂ ಮಾನವನ್ನೂ ನಿರ್ಲಯವನ್ನೂ ಹುಡುಕುವವರಿಗೆ ನಿತ್ಯಜೀವ ಶಿಕ್ಕುವದು; ಜಗಳಗಂಟಿಗರಾಗಿ ಸತ್ಯಕ್ಕೆ ಅವಿಧೇಯರಾಗಿದ್ದು ಅನ್ಯಾಯಕ್ಕೆ ವಿಧೇಯರಾಗುವವರಿಗೆ ಕೋಪ ಉಗ್ರ ಉಪದ್ರ ಸಂಕಟಗಳು ಬರುತ್ತವೆ; ಏನು? ಅನ್ಯಾಯಿಗಳು ದೇವರ ರಾಜ್ಯವನ್ನು ಸ್ವತಂತ್ರಿಸಿ ಕೊಳ್ಳರೆಂದು ಅರಿಯೆಯಾ? ಮೋಸ ಹೋಗ ಬೇಡ; ಜಾರರಾದರೂ, ವಿಗ್ರಹಾರಾಧಕರಾದರೂ, ವ್ಯಭಿಚಾರಿಗಳಾದರೂ, ಪುರುಷಸಂಗಮರಾದರೂ, ಕಳ್ಳರಾದರೂ, ಲೋಭಿಗಳಾದರೂ, ಮದ್ಯಪಾನಿಗಳಾದರೂ, ಬೈಯುವವರಾದರೂ, ಕೊಲೆಗಾರ

ರಾದರೂ, ದೇವರ ರಾಜ್ಯವನ್ನು ಸ್ವತಂತ್ರಿಸಿ ಕೊಳ್ಳರು ಎಂದು ತಿಳುಕೋ.

ಪಾಪಿಯು ಮನೋಭಾವನೆಯಲ್ಲಿ ಹೆದರಿ ಕೊಂಡು, ತನ್ನ ಹೃದಯವನ್ನು ವಿಚಾರಿಸಿ, ನಾನಾ ವಿಧದ ಅಸಹ್ಯವಾದ ಪಾಪಗಳನ್ನು ದೇವರ ಕೃಪೆಯ ಬೆಳಕಿನಿಂದ ನೋಡಿ, ಮಾನಸಾಂತರವಾಗಿ, ಪಾಪವನ್ನು ಹಗೆ ಮಾಡಿ, ಅದರಿಂದ ಬಿಡುಗಡೆಯಾಗ ಬೇಕೆಂದು ಇಚ್ಛೈಸುತ್ತಾನೆ. ಆದರೆ ಪಾಪವು ತನಗಿಂತ ಬಲವಾದದ್ದು, ಅದಕ್ಕೆ ತಪ್ಪಿಸಿ ಕೊಳ್ಳಲಾರೆನೆಂದು ತಿಳಿದು, ಪೂರ್ಣ ಮನಸ್ಸಿನಿಂದ ನರಳಿ—ಸಂಕಟವುಳ್ಳವನಾದ ನನ್ನನ್ನು ಈ ಮರಣದ ಶರೀರದಿಂದ ಯಾವನು ಬಿಡಿಸುವನು ಎಂದು ಕೂಗುತ್ತಾನೆ. ಆಗ ಪರಿಶುದ್ಧಾತ್ಮವು ಮಾನಸಾಂತರವಾಗುವ ಹೃದಯದ ಸಮೀಪಕ್ಕೆ ಬಂದು, ದೇವರ ಕೃಪೆಯ ಜ್ವಾಲೆಗಳಿಂದ ಅದನ್ನು ತುಂಬಿಸಿ, ಬೆಳಕನ್ನೂ ಜೀವದ ಬಲವನ್ನೂ ಕೊಟ್ಟು—ನಿನ್ನ ಕರ್ತನಾದ ಯೇಸು ಕ್ರಿಸ್ತನ ಮುಖಾಂತರ ದೇವರ ಕೃಪೆಯು ನಿನ್ನನ್ನು ರಕ್ಷಿಸುವದೆಂದು ಪ್ರತ್ಯುತ್ತರವಾಗಿ ಹೇಳುತ್ತದೆ. (ರೋಮ. ೭, ೨೧.)

ಪರಿಶುದ್ಧಾತ್ಮದ ಬೆಳಕು ಹೃದಯದಲ್ಲಿ ಶೇರಿದಂದಿನಿಂದ ಕೃಪೆಯ ಜ್ವಾಲೆಗಳು ಅದರಲ್ಲಿ ಪ್ರಬಲವಾಗುತ್ತವೆ. ಆಗ ಸೈತಾನನೂ ಅವನ ಅಸಹ್ಯವಾದ ಗುಣವೂ ಅದನ್ನು ತಾಳ

ಲಾರದೆ, ಓಡಿ ಹೋಗುತ್ತವೆ. ಪಾಪಗಳ ಗುರ್ತುಗಳಾಗಿರುವ ಅಸಹ್ಯಕರವಾದ ಕ್ರೂರ ಮೃಗಗಳು ಕೃಪೆಯ ಬೆಳಕಿಗೆ ಭಯ ಪಟ್ಟು, ಅದಕ್ಕೆ ಬೆನ್ನು ಕೊಟ್ಟು, ಜಾರಿ ಹೋಗುತ್ತವೆ. ಹಗಲು ಮೂಡುವಾಗ, ಇರುಳು ಕಾಣದೇ ಹೋಗುವದು. ಪಾಪವು ಅಂಧಕಾರವಾಗಿದೆ; ಕೃಪೆಯು ಬೆಳಕಾಗಿದೆ. ಪಾಪದ ಹಗೆ ಮನುಷ್ಯನ ಹೃದಯದಲ್ಲಿ ಹುಟ್ಟಿದ ಮೇಲೆ, ಸೈತಾನನು ಸೋತು ಹೋಗುತ್ತಾನೆ; ಯಾಕಂದರೆ ಪಾಪದಲ್ಲಿಯೂ ಅಂಧಕಾರದಲ್ಲಿಯೂ ಅವನ ರಾಜ್ಯವದೆ; ಪಾಪವನ್ನು ಪ್ರೀತಿ ಮಾಡುವ ಹೃದಯದಲ್ಲಿ ಅವನ ಸ್ಥಾನವದೆ.

ಓ ಆತ್ಮಗಳೇ, ಪಾಪಗಳಿಂದ ಬಿಡುಗಡೆಯಾಗ ಬೇಕೆಂದು ಇಚ್ಛೈಸುವವನು ಅಧೈರ್ಯನಾಗ ಬೇಡ. ಪಾಪದ ಬೇರುಗಳನ್ನೆಲ್ಲಾ ಮನುಷ್ಯನು ತಾನೇ ಕಿತ್ತು ಹಾಕುವದು ಅವಶ್ಯವಿಲ್ಲ. ಪಾಪದ ನಿಜವಾದ ಹಗೆಯೂ ದೇವರ ನಿಜವಾದ ಕೃಪೆಯೂ ಹೃದಯದಲ್ಲಿ ಹುಟ್ಟಿದರೆ, ಸೈತಾನನನ್ನು ಹೊರಡಿಸಿ, ಆ ದುಷ್ಟ ಮೃಗಗಳನ್ನೆಲ್ಲ ತುಳಿದು ದೊಬ್ಬುವಂಥ ಪೂರ್ಣ ರಕ್ಷಣೆಯ ತ್ರಾಣವನ್ನು ದೇವರು ದಯ ಮಾಡುತ್ತಾನೆ.

## ಪ್ರಾರ್ಥನೆಯು.

ಸಮಸ್ತ ಬೆಳಕಿಗೂ ಜೀವಕ್ಕೂ ಮೂಲವಾದ ದೇವರೇ, ನಿನ್ನ ಆತ್ಮದ ಪ್ರಕಾಶದಿಂದ ಪಾಪವು ಅಸಹ್ಯವಾದದ್ದೆಂದೂ ನಾಶಕರವಾದದ್ದೆಂದೂ ನೋಡಿ, ತಿಳುಕೊಳ್ಳುತ್ತೇನೆ. ನಾನು ಅದನ್ನು ನೋಡಿ ಬದುಕುವ ಹಾಗೆ ಜೀವದ ಬೆಳಕನ್ನು ನನ್ನ ಅಂತರ್ಯದಲ್ಲಿ ಉದಯಿಸಲೀಸು. ಪಾಪಿಯಾದ ನಾನು ಸಾಯ ಬೇಕೆಂಬ ಅಪೇಕ್ಷೆ ನಿನಗಿಲ್ಲ. ನಿಶ್ಚಯವಾಗಿ, ಪಾಪಿಯು ಮಾನಸಾಂತರ ಪಟ್ಟು ಬದುಕ ಬೇಕೆಂದು, ನೀನು ಇಚ್ಛೈಸುತ್ತೀ. ನನ್ನ ಕಣ್ಣು ಕಟ್ಟಿ, ಸೈತಾನನ ಕೈಗೆ ನನ್ನನ್ನು ಒಪ್ಪಿಸಿದ ಪಾಪದ ಭಾವವನ್ನು ನನಗೆ ತೋರಿಸು. ಎಲ್ಲಾ ಪಾಪಿಷ್ಟರಿಗೆ ಯೇಸು ಕ್ರಿಸ್ತನ ಮುಖಾಂತರ ನೀನು ಕೊಡ ಹಾರೈಸುವ ಕೃಪೆಯನ್ನು ನನಗೆ ಕೊಡು. ನಿನ್ನ ಕೃಪೆಯು ನನ್ನ ಹೃದಯದಲ್ಲಿ ವಿಸ್ತಾರವಾಗಿ, ಕ್ಷೇಮಕರವಾದ ವ್ಯಥೆಯನ್ನೂ ಮಾನಸಾಂತರವನ್ನೂ ಹುಟ್ಟಿಸಿ, ಪಾಪವನ್ನೂ ಮರಣವನ್ನೂ ಸೈತಾನನನ್ನೂ ನನ್ನಿಂದ ದೂರ ಮಾಡಿ, ನಿನಗೆ ವಾಸಸ್ಥಳವನ್ನು ಸಿದ್ಧ ಮಾಡಲಿ. ನಾನು ಪಾಪದ ದಾಸತ್ವದಿಂದ ಬಿಡುಗಡೆಯಾಗಿ ಸೈತಾನನ ಮೋಸ ತಂತ್ರಗಳಿಗೆ ತಪ್ಪಿಸಿ ಕೊಳ್ಳುವ ಹಾಗೆ, ನಿನ್ನ ಪ್ರೀತಿಯನ್ನೂ ನಿನ್ನ ಆಜ್ಞೆಗಳ

ಮಾರ್ಗಕ್ಕೆ ಮೆಚ್ಚುವ ಮನಸ್ಸನ್ನೂ ಉಂಟು ಮಾಡುವ ನಿನ್ನ ಪರಿಶುದ್ಧ ಆತ್ಮವನ್ನು ನನಗೆ ಕೊಡು. ಪಾಪ ಮಾಡುವವನು ಪಾಪಕ್ಕೆ ದಾಸನಾಗಿದ್ದು ನರಕದ ಮಗನಾಗಿದ್ದಾನೆಂಬುವದನ್ನು ನನಗೆ ತಿಳಿಸು. ದುಷ್ಟನು ನಿನ್ನ ಮುಂದೆ ನಿಲ್ಲಲಾರನೆಂದೂ, ಅನ್ಯಾಯಿಯು ನಿನ್ನ ರಾಜ್ಯದಲ್ಲಿ ಶೇರಲಾರನೆಂದೂ, ನಿತ್ಯ ಮರಣವೂ ಕಠಿಣವಾದ ತೀರ್ಪೂ ಕಡೆ ಇಲ್ಲದ ಶಾಪವೂ ದುಷ್ಕರ್ಮಿಗಳ ಮೇಲೆ ಬರುವದೆಂದೂ, ನನಗೆ ಹೇಳುವ ನಿನ್ನ ವಾಕ್ಯವನ್ನು ನಾನು ಮರೆಯದ ಹಾಗೆ, ನನ್ನನ್ನು ಎಚ್ಚರಿಸು. ನಾನು ಮಾಡಿದ ಎಲ್ಲಾ ಪಾಪಗಳಿಗೋಸ್ಕರ ಸತ್ಯವಾಗಿ ದುಃಖ ಪಟ್ಟು, ಅವುಗಳನ್ನು ಪೂರ್ಣ ಹೃದಯದಿಂದ ಅರಿಕೆ ಮಾಡಿ, ಪಾಪದ ಎಲ್ಲಾ ಕುರುಡತನದಿಂದ ತೊಲಗಿ, ನಿನ್ನ ಕಡೆಗೆ ತಿರುಗಿ ಕೊಂಡು, ನಿನ್ನ ಕೃಪೆಯನ್ನೂ ಬೆಳಕನ್ನೂ ಐಕ್ಯವನ್ನೂ ಹೊಂದಿ, ನಿನ್ನನ್ನು ಮೆಚ್ಚಿಸುವ ಹಾಗೆ, ನಿನ್ನ ಕೃಪೆಯ ಸಹಾಯವನ್ನು ನನಗೆ ಮಾಡು. ಆಮೆನ್.



# ೭. ಚಿತ್ರ.

ಯೇಸು ಕ್ರಿಸ್ತನ ನಾಮವನ್ನೂ ಸುವಾರ್ತೆಯನ್ನೂ ನಂಬಿ
ಪರಿಶುದ್ಧಾತ್ಮವು ತುಂಬಿದ ಪಾಪಿಷ್ಟನ ಅಂತರ್ಯವು.

ಪಾಪಿಷ್ಟನು ತನ್ನ ಪಾಪಗಳನ್ನೂ ದೇವರ ಕೃಪೆಯನ್ನೂ ತಾಳ್ಮೆಯನ್ನೂ ತಿಳುಕೊಂಡ ಮೇಲೆ, ಮನೋವ್ಯಥೆಯಿಂದ ನರಳಿ, ಪಶ್ಚಾತ್ತಾಪದಿಂದ ಕಣ್ಣೀರು ಸುರಿಸಲಾರಂಭಿಸುತ್ತಾನೆ. ಯಾಕಂದರೆ ಮಿತಿ ಇಲ್ಲದ ಪ್ರೀತಿ ತಾಳ್ಮೆಯುಳ್ಳ ದೇವರ ಚಿತ್ರವನ್ನು ಅತಿ ದುಷ್ಟನಾಗಿ ಮೀರಿ, ದೇವರನ್ನು ಬಿಟ್ಟು, ತಿಳಿಯದೆ ತಿರಸ್ಕರಿಸಿದದರಿಂದಲೂ ಈ ವರೆಗೆ ಶಾಪಗ್ರಸ್ತನಾಗಿರುವ ಸೈತಾನನಿಗೆ ಅಜ್ಞಾನಿಯಾಗಿ ಸೇವೆ ಮಾಡಿದದರಿಂದಲೂ ತಾಳ ಕೂಡದ ವ್ಯಸನವು ಹೃದಯದಲ್ಲಿ ಹುಟ್ಟುವದು.

ಪಾಪಿಷ್ಟನು ಈ ಪ್ರಕಾರ ಭಿನ್ನಹೃದಯದಿಂದ ಕಣ್ಣೀರು ಸುರಿಸಿ ಗೋಳಾಡಿದರೆ, ಮುರಿದ ಹೃದಯಗಳನ್ನು ಸ್ವಸ್ಥ ಮಾಡುವ ದೇವರು ಅವನಿಗೆ ಸಮಾಧಾನದ ಮಾರ್ಗ ತೋರಿಸುತ್ತಾನೆ. ಯಾಕಂದರೆ ಮುರಿದ ಹೃದಯದವರಿಗೆ ಕರ್ತನು ಸಮೀಪವಾಗಿದ್ದಾನೆ; ನಲಗಿದ ಆತ್ಮದವರನ್ನು ರಕ್ಷಿಸುತ್ತಾನೆ. (ಕೀರ್ತ. ೩೪, ೧೮.) ಮುರಿದ ಹೃದಯದವರನ್ನು ಸ್ವಸ್ಥ

ಮಾಡಿ, ಅವರ ಘಾಯಗಳನ್ನು ಕಟ್ಟುತ್ತಾನೆ. (ಕೀರ್ತ. ೧೪೭, ೩.) ಮಾನಸಾಂತರ ಪಡುವವರನ್ನು ದೇವರು ಸಮಾಧಾನ ಪಡಿಸುತ್ತಾನೆ. ಆದದರಿಂದ ಎರಡನೇ ಚಿತ್ರದಲ್ಲಿ ಖಡ್ಗವನ್ನೂ ತಲೆಬುರುಡೆಯನ್ನೂ ತೋರಿಸಿದ ದೂತನು ಇದರಲ್ಲಿ ಸುವಾರ್ತೆಯ ಪುಸ್ತಕವನ್ನೂ ಯೇಸು ಕ್ರಿಸ್ತನ ಕ್ರೂಜೆಯನ್ನೂ ತೋರಿಸುತ್ತಾನೆ. ಅದರ ಅಭಿಪ್ರಾಯವೇನಂದರೆ: ದೇವರು ಪಾಪಗಳನ್ನು ಪರಿಹರಿಸುತ್ತಾನೆಂಬ ನಿಶ್ಚಯವೂ ಅವುಗಳನ್ನು ಪರಿಹರಿಸುವ ರೀತಿಯೂ ಯಾವವೆಂದು ದೇವರ ವಾಕ್ಯದಿಂದ ತಿಳುಕೊಂಡರೆ ಹೊರ್ತು, ಮನುಷ್ಯನು ಗ್ರಹಿಸಲಾರನು. ಈ ಮರ್ಮವನ್ನು ಕಂಡು ಕೊಳ್ಳುವದಕ್ಕೆ ಮನುಷ್ಯಜ್ಞಾನ ಸಾಲದು. ಲೋಕೈಕ ಗುರುವಿನ ಉಪದೇಶವು ಅವಶ್ಯವಾಗಿ ಬೇಕು. ಈ ಉಪದೇಶವು ಯೆಹೂದ್ಯರಲ್ಲಿ ಉಂಟಾದ ಪರಿಶುದ್ಧ ಬರಹದಲ್ಲಿ ಇರುತ್ತದೆ. ಅದರಿಂದ ಮನುಷ್ಯರಿಗೆ ಪ್ರಕಟವಾದ ಮೂಲಬೋಧನೆಗಳು ಯಾವವಂದರೆ: ದೇವರು ಪಾಪಕ್ಕೆ ಮರಣದ ಶಿಕ್ಷೆಯನ್ನು ನೇಮಿಸಿದನು; ಆದಿಮನುಷ್ಯರು ದೇವರ ನ್ಯಾಯವನ್ನು ಅಲಕ್ಷ್ಯ ಮಾಡಿ, ಪಾಪದಲ್ಲಿ ಬಿದ್ದು, ಮರಣಕ್ಕೆ ಒಳಗಾದದರಿಂದ ಮರಣವು ಸಮಸ್ತ ಲೋಕದಲ್ಲಿರುವ ಎಲ್ಲಾ ಪಾಪಿಗಳ ಮೇಲೆ ಅಧಿಕಾರ ಹೊಂದಿತು; ತಕ್ಕ ಕಾಲದಲ್ಲಿ ಒಬ್ಬನೇ ನೀತಿವಂತನಾದ ಯೇ

ಸು ಕ್ರಿಸ್ತನು ಈ ಲೋಕಕ್ಕೆ ಬಂದು, ಬಡ ಪಾಪಿಗಳಾದ ಮನುಷ್ಯರಿಗೆ ಪರಮತಂದೆಯಾದ ದೇವರ ಪ್ರೀತಿಯನ್ನು ತಿಳಿಸಿ, ವಾಕ್ಯದಿಂದಲೂ ಕೃತ್ಯದಿಂದಲೂ ದೇವರ ಗುಣಗಳನ್ನು ಪ್ರಕಟ ಮಾಡಿದನು. ಯೇಸು ಪರಿಶುದ್ಧ ಮನುಷ್ಯನಾಗಿದ್ದು, ಪಾಪಿಗಳ ಮಧ್ಯದಲ್ಲಿ ಮೂವತ್ತು ವರುಷ ನಡೆದು ಕೊಂಡ ಮೇಲೆ, ಆಶ್ಚರ್ಯವಾದ ಪ್ರೀತಿಯಿಂದ ಮನುಷ್ಯರ ಪಾಪವನ್ನೂ ಅದಕ್ಕೆ ಬರ ತಕ್ಕ ಶಿಕ್ಷೆಯನ್ನೂ ತಾನು ಹೊತ್ತು ಕೊಂಡು, ಲೋಕಕ್ಕೋಸ್ಕರ ಕ್ರೂಜೆಯಲ್ಲಿ ಕಳ್ಳನಂತೆ ಸತ್ತನು; ಈ ಪ್ರಕಾರ ತನ್ನನ್ನು ತಾನೇ ಅರ್ಪಿಸಿದದರಿಂದ ಕರ್ತನು ಎಲ್ಲಾ ಮನುಷ್ಯರಿಗೋಸ್ಕರ ಪೂರ್ಣ ಪುಣ್ಯವನ್ನೂ ಪುಣ್ಯಫಲವಾದ ನಿತ್ಯಜೀವವನ್ನೂ ಸಂಪಾದಿಸಿದನು. ಮರಣಕ್ಕೆ ಒಳಗಾದ ಪಾಪಿಗಳು ನಿತ್ಯಜೀವವನ್ನು ಹೊಂದುವ ಮಾರ್ಗವು ಇದೇ. ಸಾವಿರದ ಎಂಟುನೂರು ವರುಷದ ಹಿಂದೆ ಆದ ಈ ರಕ್ಷಣೆಯ ಕೃತ್ಯವು ಲೋಕದಾರಂಭದಿಂದ ಉಂಟಾದ ಕಾರ್ಯಗಳಲ್ಲಿ ಶ್ರೇಷ್ಠವಾದದ್ದು. ಪರಿಶುದ್ಧ ಬರಹದಲ್ಲಿ ಬರದದ್ದೇನಂದರೆ: ಒಬ್ಬನು ಎಲ್ಲರಿಗೋಸ್ಕರ ಸತ್ತರೆ, ಎಲ್ಲರೂ ಸತ್ತು ಹೋದ ಹಾಗೆ ಆಯಿತು. (೨ ಕೊರ್. ೫, ೧೪.) ಪುಣ್ಯಹೀನರಿಗೆ ನೀತಿವಂತನಾದ ಆ ಒಬ್ಬನ ಎಲ್ಲಾ ಪುಣ್ಯವು ವಿಶ್ವಾಸದ ಮೂಲವಾಗಿ ಶಿಕ್ಕುವದು. ಕರ್ಮಗಳಿಂದ ಸದ್ಗತಿ ಸಂಪಾ

ದಿಸುವದು ಎಲ್ಲಾ ಮನುಷ್ಯರಿಗೆ ಅಸಾಧ್ಯವಾಗಿದೆ. ಆದರೆ ಯೇಸುವಿನ ಸತ್ಕರ್ಮದ ಮೂಲವಾಗಿ ಪರಮಗತಿ ಹೊಂದುವದು ವಿಶ್ವಾಸಿಸುವವರೆಲ್ಲರಿಗೆ ಸಾಧ್ಯವಾಗಿರುತ್ತದೆ. ಪಾಪವಿಲ್ಲದ ಯೇಸುವೆಂಬ ಲೋಕರಕ್ಷಕನು ಎಲ್ಲಾ ಲೋಕಕ್ಕೋಸ್ಕರ ಕ್ರೂಜೆಯಲ್ಲಿ ಮರಣ ಪಟ್ಟದರಿಂದ, ಆತನ ಹೆಸರಿನಲ್ಲಿ ವಿಶ್ವಾಸವಿಡುವವರೆಲ್ಲರು ಪಾಪಪರಿಹಾರವನ್ನೂ ನಿತ್ಯಜೀವವನ್ನೂ ಹೊಂದುತ್ತಾರೆ.

ಮನುಷ್ಯನು ತಾನು ಪಾಪಿ ಎಂದು ತಿಳಿದು, ಮರಣಕ್ಕೂ ನರಕಕ್ಕೂ ಭಯ ಪಟ್ಟು, ನರಕಲ್ಪನೆಯಾದ ಮೋಸದ ಪುರಾಣ ಶಾಸ್ತ್ರಗಳನ್ನು ವಿಶ್ವಾಸಿಸದೆ, ಲೋಕದ ರಕ್ಷಕನಾಗಿ ಎಲ್ಲಾ ಮನುಷ್ಯರಿಗೋಸ್ಕರ ಮರಣದ ರುಚಿಯನ್ನು ನೋಡಿ, ಶಾಪವನ್ನು ತಾಳಿದ ಯೇಸು ಕ್ರಿಸ್ತನಲ್ಲಿ ಪ್ರಕಟವಾದ ಎಲ್ಲಾ ಲೋಕದ ಮೇಲಿರುವ ದೇವರ ಪ್ರೀತಿಯ ವಾಕ್ಯವನ್ನು ಕೇಳಿ, ದೇವರು ತನ್ನ ಮಗನ ವಿಷಯವಾಗಿ ಕೊಡುವ ಸಾಕ್ಷಿಯನ್ನು ಯಥಾರ್ಥ ಮನಸ್ಸಿನಿಂದ ನಂಬಿದರೆ, ಪಾರಿವಾಳದ ರೂಪದಿಂದ ಸೂಚಿಸಿದ ದೇವರ ಆತ್ಮವು ಪಾಪಿಷ್ಟನ ಹೃದಯದಲ್ಲಿ ಮೇಲಿನಿಂದ ಇಳಿದು ಬಂದು, ಮನುಷ್ಯನು ಕೇಳಿದ ವಾಕ್ಯಕ್ಕೆ ಸಾಕ್ಷಿ ಕೊಟ್ಟು ಹೇಳುವದೇನಂದರೆ: ಭಯವನ್ನು ಬಿಟ್ಟು ಸಂತೋಷವಾಗಿರು; ನಿನ್ನ ಮೇಲೆ ಅಪರಾ

ಥವಿಲ್ಲ; ಯೇಸು ಕ್ರಿಸ್ತನು ಲೋಕದ ಎಲ್ಲಾ ಪಾಪವನ್ನೂ ನಿನ್ನ ಎಲ್ಲಾ ಪಾಪಗಳನ್ನೂ ಹೊತ್ತು ಕೊಂಡು, ತನ್ನನ್ನು ಬಲಿಯಾಗಿ ಅರ್ಪಿಸಿ, ತನ್ನ ಪ್ರಾಣವನ್ನು ಕೊಟ್ಟದರಿಂದ, ನೀನು ಮರಣದಿಂದ ಬಿಡುಗಡೆಯಾಗಿ, ದೇವರಿಗೆ ಪ್ರಿಯ ಮಗುವಾಗಿ, ನಿತ್ಯಜೀವವನ್ನು ಹೊಂದಿದ್ಧೀ. ಇಂಥಾ ಹಿತವಾದ ಆದರಣೆಯ ಮಾತುಗಳನ್ನು ಹೇಳಿ, ಮನುಷ್ಯನ ಹೃದಯಕ್ಕೆ ಆನಂದವನ್ನು ಉಂಟು ಮಾಡಿ, ಅದನ್ನು ತನ್ನ ವಶ ಮಾಡಿ ಕೊಳ್ಳುತ್ತದೆ. ಇದರಿಂದ ದೇವರ ರಾಜತ್ವಕ್ಕೆ ಆರಂಭವು ಉಂಟಾಗಿ, ದೇವರ ನೀತಿ ಸಮಾಧಾನ ಆನಂದಗಳ ಬೆಳಕೂ ಅಗ್ನಿಯೂ ಪಾಪಿಯ ಹೃದಯದಲ್ಲಿ ಹಬ್ಬುತ್ತದೆ. ಆಗ ಮನುಷ್ಯನು ಸುರಿಸುವ ಕಣ್ಣೀರು ಆನಂದಜಲವಾಗಿದೆ. ಯಾಕಂದರೆ ಕಿವಿಗಳಿಗೆ ಕೇಳ್ವಿಕೆಯೂ ಕಣ್ಣುಗಳಿಗೆ ನೋಟವೂ ದೊರಕಿದದರಿಂದ ಅವನು ದೇವರ ವಾಕ್ಯವನ್ನು ಕೇಳಿ, ಸುವಾರ್ತೆಯ ಮರ್ಮವನ್ನು ನೋಡಿ, ಜೀವವುಳ್ಳ ದೇವರ ಐಕ್ಯದಲ್ಲಿ ಉತ್ಸಹವಾಗಿರುತ್ತಾನೆ. ವಿಶ್ವಾಸಕ್ಕೂ ಆಶೆಗೂ ಚೈತನ್ಯ ಬಂದದ್ದಕ್ಕೆ ಚಿತ್ರದಲ್ಲಿ ಪ್ರಕಾಶಿಸುವ ನಕ್ಷತ್ರವು ಸಾಮ್ಯವಾಗಿದೆ. ಸೈತಾನನೂ ದುಷ್ಟ ಮೃಗಗಳಾದ ಅವನ ಗಣವೂ ದೇವರ ಆತ್ಮಕ್ಕೆ ವಶವಾದ ಹೃದಯದಿಂದ ಹೊರಗಾದ ಕಾರಣ, ಮನುಷ್ಯನು ಹಿಗ್ಗಿದ ಹೃದಯದಿಂದ ರಕ್ಷಣೆಯ ಅ

ನುಭವದಲ್ಲಿ ಮುದಗೊಂಡು, ಸಂತೋಷ ಭರಿತವಾದ ಕೂಸಿನ ಪ್ರಕಾರ—ಹಳೆದೆಲ್ಲಾ ಕಳದು ಹೋಗಿ, ಇಗೋ, ಎಲ್ಲಾ ಹೊಸತಾಯಿತು ಎಂದು ಹಾಡಿ, ಕುಣಿದಾಡ ಮನಸ್ಸಾಗಿದ್ದಾನೆ. (೨ ಕೊರಿ. ೫, ೧೭.) ವಿಶ್ವಾಸದಿಂದ ನಿತ್ಯಜೀವದ ಅನುಭವವನ್ನು ಹೊಂದಿದ ಮನುಷ್ಯನ ಸ್ಥಿತಿಯು ಇದೇ.



## ಪ್ರಾರ್ಥನೆಯು.

ದಿವ್ಯ ರಕ್ಷಕನೇ, ನಿನ್ನ ಕೃಪೆಯಲ್ಲಿಯೂ ಪ್ರೀತಿಯಲ್ಲಿಯೂ ತಕ್ಕ ರೀತಿಯಿಂದ ಸಂತೋಷ ಪಡುವದಕ್ಕೂ, ಮಹಿಮೆಯುಳ್ಳ ರಕ್ಷಣ್ಯಕರವಾದ ಸುವಾರ್ತೆಗಾಗಿ ಯೋಗ್ಯವಾದ ತೆರದಿಂದ ನಿನ್ನನ್ನು ಸ್ತುತಿಸುವದಕ್ಕೂ ನನಗೆ ಶಕ್ತಿ ಸಾಲದು. ನಿನ್ನ ರಕ್ತದಿಂದಾಗುವ ವಿಮೋಚನೆಯಾಗಿರುವ ನನ್ನ ಸಕಲ ಅಕ್ರಮಗಳ ಪರಿಹಾರವನ್ನು ಹೊಂದಿದ್ದೇನೆ. (ಕೊಲೊ. ೧, ೧೪.) ನೀನು ಆತ್ಮದ ಮುಂಗಡವನ್ನು ನನಗೆ ಕೊಟ್ಟು, ರಕ್ಷಣೆಯ ದಿವಸಕ್ಕಾಗಿ ನನಗೆ ಮುದ್ರೆ ಹಾಕಿದ್ದೀ. (ಎಫೆ. ೧, ೧೩. ೧೪.) ನೀನು ನನಗೆ ಕೊಟ್ಟ ವಿಶ್ವಾಸವನ್ನು ಹೆಚ್ಚು ಹೆಚ್ಚಾಗಿ ಬಲ ಪಡಿಸಿ, ನೀನು ನಿನ್ನ ಜನ್ಮ ಜೀವ ಶ್ರಮೆ

ಮರಣಾದಿಗಳಿಂದ ನನಗೋಸ್ಕರ ಸಂಪಾದಿಸಿ, ಸುವಾರ್ತೆಯ ವಾಕ್ಯದಿಂದ ನನಗೆ ತಿಳಿಸಿದ ದಿವ್ಯ ಕರುಣೆಗಳ ಅಮಿತವಾದ ಐಶ್ವರ್ಯವನ್ನು ನಾನು ಕಂಡು ಗ್ರಹಿಸುವ ಹಾಗೆ, ನನ್ನ ಮನೋದೃಷ್ಟಿಯನ್ನು ಹೆಚ್ಚು ಹೆಚ್ಚಾಗಿ ಬೆಳಗಿಸು. ನೀನು ನನಗೆ ಕೊಟ್ಟ ಕೃಪೆ ಎಷ್ಟೋ ಅಮೌಲ್ಯವು. ಮುಂಚೆ ನನ್ನ ಆತ್ಮವೂ ಶರೀರವೂ ಸೈತಾನನ ಬೀಡಾಗಿದ್ದವು; ಈಗ ನೀನು ಕೊಟ್ಟ ಆತ್ಮವು ನನ್ನಲ್ಲಿ ವಾಸಿಸಿ, ನನ್ನನ್ನು ನಿನಗೆ ಶುದ್ಧವಾದ ಮನೆ ಆಗ ಮಾಡುತ್ತದೆ. ಮುಂಚೆ ಪಾಪಕ್ಕೆ ದಾಸನಾಗಿದ್ದೆನು; ಈಗ ದೇವರಿಗೆ ಮಗುವಾಗಿದ್ಧೇನೆ. ಮುಂಚೆ ಅಶುದ್ಧಾತ್ಮಗಳ ಅಸಹ್ಯವಾದ ಗರಡಿಯಾಗಿದ್ದೆನು; ಈಗ ದೇವದೂತರಿಗೆ ಆನಂದಕರವಾದ ಆಶೀರ್ವಾದಸ್ಥಾನವಾಗಿದ್ಧೇನೆ. ಮುಂಚೆ ನನ್ನ ಹೃದಯವೆಂಬ ಆಕಾಶದಲ್ಲಿ ಪಾಪವೆಂಬ ಮೋಡದೊಡ್ಡುಗಳು ಕೂಡಿ, ಸೈತಾನನ ಕೋಪವೆಂಬ ಬಿರುಘಾಳಿಯಿಂದ ಅಲ್ಲೋಲಕಲ್ಲೋಲವಾಗಿ ತುಂಬಿದ ಕತ್ತಲೆಯಾಗಿತ್ತು; ಈಗ ಪರಿಶುದ್ಧಾತ್ಮದ ಬೆಳಕಿನಿಂದಲೂ ಒಳ್ಳೇ ಘಾಳಿಯಿಂದಲೂ ಕತ್ತಲೆಯ ತೊಂದರೆ ಪರಿಹಾರವಾಗಿ, ನೀತಿಯ ಸೂರ್ಯನು ನಿರ್ಮಲವಾದ ಆಕಾಶದಲ್ಲಿ ಪ್ರಕಾಶಿಸುತ್ತಾನೆ. ನನ್ನ ರಕ್ಷಣೆಗೆ ಶತ್ರುಗಳಾದವರ ಸೈನ್ಯವು ಪಲಾಯನವಾಗಿದೆ. ಸೈತಾನನು ನನಗೆ ಕಟ್ಟಿದ ಪಾಪದ ನಿಗಳಬಂಧನಗಳು

ಕಡಿದು ಹೋಗಿವೆ. ಬಿಡುಗಡೆಯಾಗಿ ಆನಂದದಿಂದಿದ್ದೇನೆ; ಕರುಣೆಯನ್ನು ಹೊಂದಿದ್ದೇನೆ; ಕೃಪೆಯನ್ನು ಕಂಡು ಕೊಂಡಿದ್ದೇನೆ; ಕೃತಜ್ಞನಾಗಿ ನಿನ್ನನ್ನು ಎಂದಿಗೂ ಸ್ತುತಿಸುವೆನು. ನಿನ್ನ ಹೆಸರು ನಿತ್ಯವಾಗಿ ನನ್ನ ಮನಸ್ಸಿನಲ್ಲಿಯೂ ನನ್ನ ನಾಲಿಗೆಯಲ್ಲಿಯೂ ಇರ ಬೇಕು.

ಒಂದು ಮಾತ್ರ ನಾನು ಬೇಡಿ ಕೊಳ್ಳುತ್ತೇನೆ—ಪ್ರಿಯ ರಕ್ಷಕನೇ, ನನ್ನ ರಕ್ಷಣೆಯ ದೇವರೇ, ನನ್ನನ್ನು ವಿಸರ್ಜಿಸ ಬೇಡ. ನನ್ನನ್ನು ಬಿಟ್ಟು ಬಿಡ ಬೇಡ. ನಿನ್ನ ನಾಮಕ್ಕೆ ಭಯ ಪಡುವ ಹಾಗೆ ನನ್ನ ಹೃದಯವನ್ನು ಕಾಪಾಡು. ಶತ್ರುವು ನನಗೆ ವಂಚನೆ ಮಾಡದ ಹಾಗೆಯೂ, ಪಾಪವು ನನ್ನನ್ನು ಮೋಸಗೊಳಿಸದ ಹಾಗೆಯೂ, ನನ್ನನ್ನು ಎಚ್ಚರಿಸು. ನನ್ನ ಹೃದಯವು ಪಾಪವನ್ನು ನಿತ್ಯ ಹಗೆ ಮಾಡಿ, ಪಾಪದ ಮಾರ್ಗವನ್ನು ನರಕದಂತೆ ಅಸಹ್ಯಿಸುವ ಹಾಗೆ, ನಿನ್ನ ಕೃಪೆಯು ಅದನ್ನು ದೃಢ ಪಡಿಸಲಿ. ನನಗೆ ಬಿಡುಗಡೆಯಾದ ಮೇಲೆ ತಿರಿಗಿ ಪಾಪಕ್ಕೆ ದಾಸನಾಗದ ಹಾಗೆ, ನನ್ನನ್ನು ಕಾಪಾಡು. ನೀನು ನನ್ನ ಹೃದಯವನ್ನು ಶುದ್ಧ ಮಾಡಿದ ಮೇಲೆ, ಅದು ತಿರಿಗಿ ಅಪವಿತ್ರವಾಗದ ಹಾಗೆ ನೋಡಿಕೋ. ನನ್ನ ಹೃದಯವು ಎಂದಿಗೂ ಪರಿಶುದ್ಧಾತ್ಮದ ಆಲಯವೂ, ಸಮಾಧಾನ ಆನಂದ ನೀತಿಗಳ ಸ್ಥಾನವೂ, ಆಗಿರಲಿ. ಆಮೆನ್.

# ೪. ಚಿತ್ರ.

ಯೇಸು ಕ್ರಿಸ್ತನ ಪುಣ್ಯದ ಮೂಲಕದಿಂದ
ದೇವರಲ್ಲಿ ಐಕ್ಯವಾಗಿ, ಕ್ರೂಜಿತನಾದ ಯೇಸು ಕ್ರಿಸ್ತನ ಧ್ಯಾ
ನವನ್ನು ಮಾಡುವ ಮನುಷ್ಯನ ಅಂತರ್ಯವು.

ದೇವರು ತನ್ನನ್ನು ಪ್ರೀತಿಯಿಂದ ಸೇವಿಸುವದಕ್ಕಾಗಿ ಮನುಷ್ಯನನ್ನು ನಿರ್ಮಿಸಿದ್ಧಾನೆ. ಪಾಪದಲ್ಲಿ ಬಿದ್ದ ಮನುಷ್ಯನು ದೇವರಿಗೆ ಭಯ ಪಟ್ಟು, ಹಗೆ ಮಾಡಿ, ಅವಿಧೇಯನಾಗಿದ್ಧಾನೆ. ದೇವರು ತನ್ನನ್ನು ಹಗೆ ಮಾಡುತ್ತಾನೆಂದು, ಪಾಪಿಯು ವ್ಯರ್ಥವಾಗಿ ನೆನಸುತ್ತಾನೆ. ಕ್ರೂಜಿತನಾದ ಯೇಸು ಕ್ರಿಸ್ತನ ಮರಣದಲ್ಲಿ ಮನುಷ್ಯರಿಗೆ ಪ್ರತ್ಯಕ್ಷವಾದ ದೇವರ ಅಮಿತ ಪ್ರೀತಿಯನ್ನು ನಂಬುವವನೇ ಪಾಪದಿಂದ ಹುಟ್ಟಿದ ಭಯವನ್ನು ಬಿಟ್ಟು, ದೇವರಲ್ಲಿ ಪ್ರೀತಿ ಇಡಲಾರಂಭಿಸುತ್ತಾನೆ. ದೇವರನ್ನು ಪೂರ್ಣ ಹೃದಯದ ಪ್ರೀತಿಯಿಂದ ಸೇವಿಸುವ ಮನುಷ್ಯನ ಜನ್ಮವು ಸಫಲವಾಗಿದೆ. ಯೇಸು ಕ್ರಿಸ್ತನನ್ನು ನಂಬುವ ಮನುಷ್ಯನ ಹೃದಯದಲ್ಲಿ ದೇವರ ಆತ್ಮವು ಶೇರಿ, ಯೇಸು ಕ್ರಿಸ್ತನ ಕ್ರೂಜೆಯಲ್ಲಿ ಪ್ರತ್ಯಕ್ಷವಾದ ದೇವರ ಪ್ರೀತಿಯನ್ನು ಹೆಚ್ಚು ಹೆಚ್ಚಾಗಿ ಪ್ರಸಿದ್ಧ ಮಾಡುವದರಿಂದ, ಕ್ರೂಜಿತ

ನಾದ ಯೇಸು ಕ್ರಿಸ್ತನ ಸ್ಮರಣೆಯು ಭಕ್ತನ ಅಂತರ್ಯದಲ್ಲಿ ನೆಲೆಯಾಗಿರುವದು. ಯೇಸು ಕ್ರಿಸ್ತನು ನಮ್ಮ ಪಾಪದ ಪ್ರಾಯಶ್ಚಿತ್ತಕ್ಕಾಗಿ ಅನುಭವಿಸಿದ ಉಪದ್ರ ಶ್ರಮೆ ಮರಣಾದಿಗಳ ಧ್ಯಾನದಿಂದ ಭಕ್ತನ ಹೃದಯದಲ್ಲಿ ದೇವರ ಪ್ರೀತಿಯು ಹೆಚ್ಚು ಹೆಚ್ಚಾಗಿ ಬಲವಾಗುತ್ತದೆ. ಕ್ರೂಜಿತನಾದ ಯೇಸು ಕ್ರಿಸ್ತನನ್ನು ಹೊರ್ತು ನಾನು ಏನಾದರೂ ತಿಳಿಯಲಿಕ್ಕೆ ನಿರ್ಣೈಸಿ ಕೊಳ್ಳಲಿಲ್ಲವೆಂದು, ಪೌಲನು ಹೇಳುತ್ತಾನೆ. (೧ ಕೊರಿ. ೨, ೨.) ನನಗೆ ನಮ್ಮ ಕರ್ತನಾದ ಯೇಸು ಕ್ರಿಸ್ತನ ಕ್ರೂಜಿಯ ಹೊರ್ತು ಯಾವದರಲ್ಲಿಯೂ ಹೆಚ್ಚಳ ಪಡುವದು ಆಗದು; ಅದರಿಂದ ನನಗೆ ಲೋಕವು ಕ್ರೂಜಿತವಾಗಿದೆ, ನಾನು ಲೋಕಕ್ಕೆ ಕ್ರೂಜಿತನಾಗಿದ್ಧೇನೆ. (ಗಲ. ೬, ೧೪.)

ಪರಿಶುದ್ಧಾತ್ಮದ ಬೋಧನೆಯಿಂದ ಭಕ್ತನ ಹೃದಯವು ತನ್ನ ರಕ್ಷಕನ ಶ್ರಮೆ ಮರಣಗಳ ಫಲವಾದ ಆದರಣೆ ತ್ರಾಣಗಳನ್ನು ಹೆಚ್ಚು ಹೆಚ್ಚಾಗಿ ಗ್ರಹಿಸಿ, ದೃಢವಾಗುವದು. ವಿಶ್ವಾಸದ ದೃಢದಿಂದ—ದೇವರು ನಮ್ಮ ಕಡೆಯವನಾದರೆ ನಮಗೆದುರು ಯಾರು? ಸ್ವಂತ ಮಗನನ್ನು ಕನಿಕರಿಸದೆ, ಆತನನ್ನು ನಮ್ಮೆಲ್ಲರಿಗೋಸ್ಕರ ಒಪ್ಪಿಸಿ ಕೊಟ್ಟವನು. ಆತನ ಸಂಗಡ ನಮಗೆ ಎಲ್ಲಾ ದಯಪಾಲಿಸದೆ ಇರುವದು ಹ್ಯಾಗೆ? ಎಂದು ಭಕ್ತನು ಹೇಳುತ್ತಾನೆ. (ರೋಮ. ೮, ೩೧. ೩೨.) ಕ್ರಿಸ್ತನ

ಲ್ಲಿದ್ದು, ಲೋಕವನ್ನು ತನಗೆ ಅನ್ಯೋನ್ಯ ಮಾಡಿ, ಅವರ ಅಕ್ರಮಗಳನ್ನು ಅವರಿಗೆ ಎಣಿಸದೆ ಇರುವ (೨ ಕೊರಿ. ೫, ೧೯.) ತಂದೆಯಾದ ದೇವರ ನಿತ್ಯ ಪ್ರೀತಿಗೆ ಯೇಸು ಕ್ರಿಸ್ತನ ಶ್ರಮೆಯೂ ಮರಣವೂ ಈಡೆಂದು ತಿಳುಕೊಳ್ಳುತ್ತಾನೆ; ಯೇಸು ಕ್ರಿಸ್ತನನ್ನು ನಂಬಿ, ನಿರಂತರ ಪ್ರೀತಿಯಾಗಿರುವ ದೇವರನ್ನು ವಿಶ್ವಾಸಿಸಿ, ಧೈರ್ಯದಿಂದಿದ್ದಾನೆ.

ಈ ಪ್ರಕಾರ ಕ್ರೂಜಿತನಾದ ಕ್ರಿಸ್ತನು ತನ್ನ ರಕ್ಷಕನೆಂದು ನಂಬುವ ಭಕ್ತನಲ್ಲಿ ಯೇಸು ಕ್ರಿಸ್ತನ ಆತ್ಮವು ಶೇರಿ, ಯೇಸುವಿನ ಮರಣದ ಮರ್ಮವನ್ನು ಅವನಿಗೆ ಹೆಚ್ಚು ಹೆಚ್ಚಾಗಿ ತಿಳಿಸುವದರಿಂದ, ಭಕ್ತನು ತನ್ನ ಕರ್ತನ ಮರಣದಿಂದ ಪೂರ್ಣ ಆದರಣೆಯನ್ನೂ, ದೇವರ ಚಿತ್ತವನ್ನು ಪೂರೈಸುವ ತ್ರಾಣವನ್ನೂ, ಹೊಂದುತ್ತಾನೆ. ಪ್ರೀತಿಯಿಂದ ಲೋಕಕ್ಕೋಸ್ಕರ ಕ್ರೂಜಿತನಾದ ಯೇಸು ಕ್ರಿಸ್ತನನ್ನು ವಿಶ್ವಾಸಿಸುವವನಿಗೆ ಲೋಕದ ಎಲ್ಲಾ ಭ್ರಮೆಯೂ ಮಾಂಸದ ಎಲ್ಲಾ ಆಶೆಯೂ ಭೂಮಿಯ ಎಲ್ಲಾ ಮಹಿಮೆಯೂ, ಲಯವಾಗುವಂಥಾದ್ದೆಲ್ಲವೂ ಅಸಹ್ಯವಾಗುತ್ತದೆ. ಯಾವನಿಗಾದರೂ ನನ್ನ ಹಿಂದೆ ಬರಬೇಕೆಂಬ ಮನಸ್ಸಿದ್ದರೆ, ತನ್ನನ್ನು ಅಲ್ಲಗಳದು, ತನ್ನ ಕ್ರೂಜೆಯನ್ನು ಎತ್ತಿಕೊಂಡು, ನನ್ನನ್ನು ಹಿಂಬಾಲಿಸಲಿ; ಯಾಕಂದರೆ ತನ್ನ ಕ್ರೂಜೆಯನ್ನು ತಕ್ಕೊಂಡು ನನ್ನನ್ನು ಹಿಂಬಾಲಿಸ

ದವನು ನನಗೆ ಆಗದವನಾಗಿದ್ಧಾನೆ ಎಂಬ ಕರ್ತನ ವಾಕ್ಯವು ಸದಾ ಅವನ ಕಿವಿಯಲ್ಲಿರುವದು. ಆದದರಿಂದ ಕ್ರೂಜಿತನಾದ ಯೇಸುವಿಗೆ ಅನುಕೂಲನಾಗ ಬೇಕೆಂಬುವದು ಅವನ ಮುಖ್ಯಾಪೇಕ್ಷೆಯಾಗಿರುವದು. ವಿಶ್ವಾಸದಲ್ಲಿ ನೆಲೆಯಾಗಿರುವ ಭಕ್ತನಿಗೆ ಚಿತ್ರದಲ್ಲಿ ದೂತನು ರೊಟ್ಟಿಯನ್ನೂ ದ್ರಾಕ್ಷೆಯ ರಸವನ್ನೂ ಕೊಡುವದು ಏನಂದರೆ: ಕ್ರೂಜೆಯಲ್ಲಿ ಮುರಿದ ತನ್ನ ಶರೀರದ ಗುರ್ತಾದ ರೊಟ್ಟಿಯನ್ನೂ ಕ್ರೂಜೆಯಲ್ಲಿ ಚೆಲ್ಲಿದ ತನ್ನ ರಕ್ತದ ಗುರ್ತಾದ ದ್ರಾಕ್ಷೆಯ ರಸವನ್ನೂ ತಿಂದು, ಕುಡಿದು, ತಾನು ಬರುವ ಪರ್ಯಂತರ ತನ್ನ ಮರಣವನ್ನು ನೆನಸ ಬೇಕೆಂದು ಯೇಸು ಕ್ರಿಸ್ತನು ತನ್ನ ಶಿಷ್ಯರಿಗೆ ಆಜ್ಞೆಯನ್ನು ಕೊಟ್ಟು, ನಿತ್ಯಜೀವದ ಈ ಆಹಾರವನ್ನೂ ಪಾನವನ್ನೂ ಭಕ್ತರ ಸಭೆಗೆ ನೇಮಿಸಿದ್ಧಾನೆ. ಕೃತಜ್ಞನಾಗಿ ಯೇಸು ಕ್ರಿಸ್ತನ ಮರಣವನ್ನು ನೆನಪು ಮಾಡಿ ಕೊಂಡು ಆತನ ಮಾಂಸ ರಕ್ತಗಳನ್ನು ಅನುಭವಿಸುವ ಭಕ್ತನು ಮಾಂಸ ಆತ್ಮಗಳ ಎಲಾ ಕಲ್ಮಷದಿಂದ ತನ್ನನ್ನು ಶುಚಿ ಮಾಡಿ ಕೊಂಡು, ಯೇಸುವಿನ ಮರಣದ ಐಕ್ಯದಲ್ಲಿ ನೆಲೆಯಾಗಿರುವನು. ಚಿತ್ರದಲ್ಲಿ ಕಾಣುವ ಮುಳ್ಳುಕಿರೀಟವೂ ಬಾರುಗೋಲೂ ಮೊಳೆಗಳೂ ಸುತ್ತಿಗೆಯೂ ಕ್ರಿಸ್ತನ ಶ್ರಮೆ ಮರಣಗಳ ಗುರ್ತುಗಳಾಗಿವೆ.

ಬಲಗಡೆಯ ದೂತನು ಈಚಲಗರಿ ಹಿಡುಕೊಂಡದ್ದೇನಂ

ದರೆ: ಪೂರ್ವದಲ್ಲಿ ಜಯೋತ್ಸವ ಮಾಡುವವರು ಈಚಲಗ
ರಿ ಬೀಸುತ್ತಾ ಇದ್ದರು. ಯೇಸು ಕಿಸ್ತನ ಸೇವೆಯಲ್ಲಿ ಆತ
ನಿಗೋಸ್ಕರ ಧನ ಮಾನ ಮನೆ ಜೀವ ಬಿಟ್ಟು ಬಿಟ್ಟು, ಹಾಸ್ಯ
ಶ್ರಮೆ ಮರಣಗಳನ್ನು ತಾಳಿ, ಆತ್ಮಯುದ್ಧದಲ್ಲಿ ದೃಢವಾಗಿ
ರುವವರು ಜಯಶಾಲಿಗಳಾಗಿ, ದೇವರ ರಾಜ್ಯವನ್ನು ಸ್ವತಂ
ತ್ರಿಸಿ, ಮೇಲಣ ಕರೆಯುವಿಕೆಯ ಬಹುಮಾನವನ್ನು ಹೊಂ
ದಿ, ಕರ್ತನ ಸಂಗಡ ಆಳುವರು ಎಂಬ ಆಶೆಯ ಸಂತೋಷ
ವು ಭಕ್ತನ ಹೃದಯದಲ್ಲಿ ದೇವರ ಕೃಪೆಯಿಂದ ಬಲವಾಗು
ವದು.



## ಪ್ರಾರ್ಥನೆಯು.

ಪ್ರೀತಿಯೇ, ಕ್ರೂಜೆ ತಾಳಿದ ಪ್ರೀತಿಯೇ, ಯೇಸು ಕ್ರಿ
ಸ್ತನೇ, ನೀನು ನನ್ನನ್ನು ದೇವರಲ್ಲಿ ಅನ್ಯೋನ್ಯನಾಗ ಮಾಡಿ
ದ್ದೀ. ಈಗಿನಿಂದ ನೀನು ಮಾತ್ರವೇ ನನ್ನ ಹೃದಯದಲ್ಲಿ ಇ
ರ ಬೇಕು. ನಿನ್ನ ಶ್ರಮೆ ಮರಣಗಳ ಸ್ಮರಣೆಯು ನನ್ನ ಹೃದ
ಯದಲ್ಲಿ ನಿತ್ಯವಾಗಿರಲಿ. ಉಸುರಿರುವ ವರೆಗೂ ನಿನ್ನ ಕ್ರೂ
ಜೆಯನ್ನು ಧ್ಯಾನಿಸುವೆನು. ನನ್ನನ್ನು ಮೊದಲು ಪ್ರೀತಿ ಮಾ
ಡಿದ ನಿನ್ನ ಪ್ರೀತಿಯು ನನ್ನಲ್ಲಿ ಇದ್ದು, ನನ್ನ ಪೂರ್ಣ ಹೃದ

ಯದಲ್ಲಿ ಹಬ್ಬಿ, ನನ್ನ ಜಿತೇಂದ್ರಿಯಗಳಲ್ಲಿ ವ್ಯಾಪಿಸಿ, ನನ್ನ ಭಾವವನ್ನೆಲ್ಲಾ ಆಳಲಿ. ನಾನು ನಿನಗೆ ತಕ್ಕ ಹೋಲಿಕೆಯಾಗುವ ಹಾಗೆಯೂ, ನಿನ್ನ ಶ್ರಮೆ ಮರಣಗಳ ಫಲಗಳು ನನ್ನಲ್ಲಿ ಸಹ ಚನ್ನಾಗಿ ಕಾಣುವ ಹಾಗೆಯೂ, ನಿನ್ನ ಪ್ರೀತಿಯು ನನ್ನನ್ನು ನಿನಗೆ ಸಾರೂಪ್ಯನಾಗ ಮಾಡಲಿ. ನಾನು ಮುಂಚೆ ಲಾಭವೆಂದು ಎಣಿಸಿ ನಂಬಿ ಗರ್ವಿಸಿದ್ದೆಲ್ಲಾ ಈಗ ನಷ್ಟವೆಂದು ಗ್ರಹಿಸುವ ಹಾಗೆಯೂ, ಮುಂಚೆ ಜ್ಞಾನ ಮಹಿಮೆ ಎಂದೆಣಿಸಿದ್ದನ್ನು ಇಂದ್ರಜಾಲದಂತೆ ಕಸವೆಂದು ಬಿಟ್ಟು, ನರಬುದ್ಧಿ ಮೀರುವ ನಿನ್ನ ತಿಳುವಿಕೆಯನ್ನು ಪಡಕೊಳ್ಳುವ ಹಾಗೆಯೂ, ಶುದ್ಧ ಮನಸ್ಸನ್ನು ನನಗೆ ಕೊಡು. ಸರ್ವವು ನನಗೆ ನೀನೇ; ಉಳಿದದ್ದೆಲ್ಲ ನನಗೆ ಏನೂ ಅಲ್ಲ. ನಿನ್ನಲ್ಲಿದ್ದರೆ, ಬದುಕುತ್ತೇನೆ; ನಿನ್ನನ್ನು ಹೊಂದಿದ್ದರೆ, ಸರ್ವ ಲಾಭಿಯಾಗಿದ್ದೇನೆ. ನನ್ನ ಕರ್ಮಗಳಿಂದ ಹುಟ್ಟುವ ನೀತಿಯಲ್ಲಿ ಸತ್ಯವು ಇಲ್ಲ. ವಿಶ್ವಾಸಿಸುವವನಿಗೆ ನೀನು ಕೊಡುವ ನಿನ್ನ ನೀತಿಯೇ ದೇವರ ಮುಂದೆ ಸತ್ಯವಾಗಿದೆ; ಇದನ್ನೇ ನನಗೆ ಕೊಡು; ಕೊಟ್ಟರೆ ನನಗೋಸ್ಕರ ಶ್ರಮೆ ಪಟ್ಟವನಾದ ನಿನ್ನ ಐಕ್ಯದಲ್ಲಿ ಶೇರಿ, ನನಗೋಸ್ಕರ ಸತ್ತವನಾದ ನಿನ್ನ ಸಾರೂಪ್ಯನಾಗಿ, ನನ್ನ ರಕ್ಷಕನಾಗಿ ಸತ್ತವರೊಳಗಿಂದ ಎದ್ದವನಾದ ನಿನ್ನ ಜೀವತ್ರಾಣವನ್ನು ಅನುಭವಿಸಿ, ನಿತ್ಯ ಜೀವವನ್ನು ಹೊಂದುವೆನು. ಅ

ದನ್ನು ನನಗೆ ಕೊಟ್ಟರೆ, ಕ್ರಿಸ್ತನ ಸಂಗಡ ಕ್ರೂಜಿತನಾಗಿದ್ದೇನೆ, ಬದುಕುತ್ತೇನೆ. ಆದರೆ ಇನ್ನು ಮೇಲೆ ನಾನಲ್ಲ, ಕ್ರಿಸ್ತನೇ ನನ್ನಲ್ಲಿ ಬದುಕುತ್ತಾನೆ. (ಗಲ. ೨, ೨೦.) ಎಂದು ಸಂತೋಷದಿಂದ ಅರಿಕೆ ಮಾಡುವೆನು. ನನ್ನ ಜೀವವಾದ ಪ್ರಿಯ ರಕ್ಷಕನೇ, ನನ್ನ ವಿಶ್ವಾಸದ ಆದ್ಯಂತವಾಗಿರುವ ನಿನ್ನಲ್ಲಿ ದೃಷ್ಟಿ ಇಡುವದಕ್ಕೆ ನನಗೆ ಕೃಪೆಯನ್ನು ಕೊಡು. ನೀನು ನಿನ್ನ ಮುಂದೆ ಇಟ್ಟದ್ದ ಸಂತೋಷಕ್ಕೆ ಕ್ರೂಜೆಯನ್ನು ತಾಳಿ ಕೊಂಡು, ನಾಚಿಕೆಯನ್ನು ಸೈರಿಸಿದಿ. (ಇಬ್ರಿ. ೧೨, ೨.) ನಿನ್ನ ಶ್ರಮೆಯ ನೆನಪು ನನ್ನ ಆತ್ಮಕ್ಕೆ ಅಮೃತವಾಗಿದೆ. ನಿನ್ನ ಕ್ರೂಜೆಯ ನೆನಪು ಪಾಪದ ಯುದ್ಧದಲ್ಲಿ ನನಗೆ ಜಯದ ತ್ರಾಣವಾಗಿದೆ. ಉಪದ್ರದಲ್ಲಿಯೂ ಮರಣದಲ್ಲಿಯೂ ನಿನ್ನ ಮರಣವನ್ನು ನೆನಸಿ, ಧೈರ್ಯವಾಗಿದ್ದೇನೆ. ಶೋಧನೆಯಲ್ಲಿ, ಎಲ್ಲಾ ಶೋಧನೆಗಳನ್ನು ಜೈಸಿದ ನಿನ್ನನ್ನು ಧ್ಯಾನಿಸಿ, ಜೈಸುತ್ತೇನೆ. ನಿನ್ನ ಪ್ರೀತಿಯು ಸಂಶಯ ಭಯಾದಿಗಳೆಂಬ ಕತ್ತಲೆಯನ್ನು ಚದರಿಸುವ ಸೂರ್ಯನಾಗಿದೆ. ನಿನ್ನ ಪ್ರೀತಿಯ ವಿಶ್ವಾಸವು ಸೈತಾನನ ಉರಿಬಾಣಗಳನ್ನು ಹಿಮ್ಮೆಟ್ಟಿಸುವ ಹಲಿಗೆಯಾಗಿದೆ. (ಎಫೆ. ೬, ೧೬.) ನಿನ್ನ ಪ್ರೀತಿಯ ಧ್ಯಾನವು ನೇಮಕವಾದ ಯುದ್ಧದಲ್ಲಿ. ದಣಿದವನನ್ನು ಸಂಪ್ರಾಣಿಸುತ್ತದೆ. ನಿನ್ನ ಪ್ರೀತಿಯ ಗುಟ್ಟನ್ನು ನನಗೆ ಪ್ರಕಟ ಮಾಡು. ಆಮೆನ್.



# ೫. ಚಿತ್ರ.

ಈ ಚಿತ್ರದಲ್ಲಿ ಯೇಸು ಕ್ರಿಸ್ತನ ಕೃಪೆಯಿಂದ ಪರಿಶುದ್ಧಾ ತ್ಮದ ಮುಖಾಂತ್ರ ಪರಿಶುದ್ಧವಾದ ಪಾಪಿಯ ಹೃದಯದಲ್ಲಿ ದೇವರು ವಾಸವಾಗಿರುವದು ತೋರುತ್ತದೆ.

ಜೀವವುಳ್ಳ ಏಕ ದೇವರು ಪಿತೃಪುತ್ರಸದಾತ್ಮ ಸ್ವಾರೂಪನಾಗಿದ್ದಾನೆಂದು, ದೇವರ ವಾಕ್ಯದಲ್ಲಿ ಬರದದೆ. ಆದರೆ ಚಿತ್ರಗಾರನು ದೇವರ ರೂಪವನ್ನು ಬರೆಯ ಕೂಡದು, ಬರೆಯ ಬಾರದು. ಯಾರೂ ಶೇರಲಾರದ ಬೆಳಕಿನಲ್ಲಿ ದೇವರು ಇದ್ದಾನೆಂದು, ಬರಹದಲ್ಲಿ ಬರದದೆ. (೧ ತಿಮೊ. ೬, ೧೬.) ದೇವರ ರೂಪವನ್ನು ರೂಪಿಸ ಬಾರದೆಂದು, ಕಠಿಣವಾದ ಆಜ್ಞೆಯದೆ. ಆದರೆ ಯೇಸು—ಯಾವನಾದರೂ ನನ್ನನ್ನು ಪ್ರೀತಿ ಮಾಡಿದರೆ, ನನ್ನ ವಾಕ್ಯವನ್ನು ಕೈಕೊಳ್ಳುವನು; ಮತ್ತು ನನ್ನ ತಂದೆಯು ಅವನನ್ನು ಪ್ರೀತಿ ಮಾಡುವನು; ಮತ್ತು ನಾವು ಅವನ ಬಳಿಗೆ ಬಂದು ಅವನಲ್ಲಿ ವಾಸ ಮಾಡುವೆವು ಎಂದು, ಹೇಳಿದನು. (ಯೋಹಾ. ೧೪, ೨೩.) ಆದದರಿಂದ ಯೇಸುವಿನ ಮಾತನ್ನು ಪೂರ್ಣವಾಗಿ ಅಂಗೀಕರಿಸಿದ ಭಕ್ತನ ಹೃದಯದ ಸ್ಥಿತಿಯನ್ನು ತೋರಿಸುವದಕ್ಕಾಗಿ ಈ ಚಿತ್ರದ

ಲ್ಲಿ ಪರಲೋಕದಿಂದ ಬೀಳುವ ಪ್ರಕಾಶವು ಬರದದೆ. ಅದೇ ನಂದರೆ: ದೇವರ ಐಕ್ಯದಲ್ಲಿ ಶೇರಿದವನ ಹೃದಯಕ್ಕೆ ದೇವರ ಕೃಪೆಯು ಬೆಳಕಾಗಿ ಇಳಿದು ಬರುವದು. ಈ ಅನುಭವವ ನ್ನು ಹೊಂದಿದ ಭಕ್ತನ ಹೃದಯದಲ್ಲಿ ಯೇಸು ಕ್ರಿಸ್ತನ ಕ್ರೂ ಜೆಯ ಸ್ಮರಣೆಯು ದೃಢವಾಗಿದೆಂದು ತೋರಿಸುವದಕ್ಕಾಗಿ, ಈ ಚಿತ್ರದಲ್ಲಿ ಕ್ರೂಜೆಯ ರೂಪವು ಬರದದೆ. ಅದರ ಎಡ ಬಲದಲ್ಲಿ ಪಾತ್ರೆಯೂ ರೊಟ್ಟಿಯೂ ಬರದ ಅಭಿಪ್ರಾಯವೇ ನಂದರೆ: ಭಕ್ತನು ಯೇಸು ಕ್ರಿಸ್ತನ ಮುಖಾಂತ್ರ ನಿತ್ಯ ಜೀವ ದ ಆಹಾರ ಪಾನಗಳನ್ನು ಪ್ರತಿದಿನವೂ ಹೊಂದಿ, ಯೇಸು ಕ್ರಿಸ್ತನಲ್ಲಿ ಐಕ್ಯವಾಗಿರುವ ಭಕ್ತರೆಲ್ಲರ ಸಂಗಡ ಐಕ್ಯವಾಗಿ ದ್ದಾನೆ; ಯಾಕಂದರೆ ಸಭೆಯು ದ್ರಾಕ್ಷೆಯ ರಸಕ್ಕೂ ರೊಟ್ಟಿಗೂ ಸಾಮ್ಯವಾಗಿದೆ. ಹ್ಯಾಗಂದರೆ—ಅನೇಕ ದ್ರಾಕ್ಷೆಯ ಗೊಂ ಚಲುಗಳ ಹಣ್ಣುಗಳನ್ನು ಕಿವುಚುವದರಿಂದ ಒಂದೇ ದ್ರಾಕ್ಷೆ ಯ ರಸವು ಸುರಿಯುವ ಪ್ರಕಾರವೂ, ಗೋಧಿಯ ಅನೇಕ ತೆನೆಗಳ ಕಾಳುಗಳನ್ನು ಬೀಸಿ ಹಿಟ್ಟು ನಾದುವದರಿಂದ ಒಂ ದೇ ರೊಟ್ಟಿಯಾಗುವ ಪ್ರಕಾರವೂ, ದೇವರ ಪ್ರೀತಿಯಲ್ಲಿ ಐ ಕ್ಯವಾಗಿರುವ ಭಕ್ತರ ಸಭೆಯು ಏಕಭಾವವಾಗಿದೆ. ಹೃದ ಯದ ಮಧ್ಯದಲ್ಲಿ ಪಾರಿವಾಳದ ರೂಪ ಬರದ ಅಭಿಪ್ರಾಯ ವೇನಂದರೆ: ಪಾರಿವಾಳದಂತೆ ಯೇಸು ಕ್ರಿಸ್ತನ ಮೇಲೆ ಇಳಿ

ದು ಬಂದ ಪರಿಶುದ್ಧಾತ್ಮವು ಭಕ್ತನ ಹೃದಯದಲ್ಲಿ ನೆಲೆಯಾಗಿರುವದು. ಹೃದಯದ ಮೇಲ್ಗಡೆಯಲ್ಲಿ ನಕ್ಷತ್ರ ಬರದಿರುವದು ಏನೆಂದರೆ: ಸೂರ್ಯೋದಯವನ್ನು ಮುಂಗೊಳ್ಳುವ ಶುಕ್ರನಕ್ಷತ್ರದ ಓಪಾದಿಯಲ್ಲಿ, ಭಕ್ತನ ಹೃದಯದಲ್ಲಿ ನಿತ್ಯ ಜೀವದ ಆಶೆಯು ಪ್ರಕಾಶಿಸುತ್ತದೆ ಎಂಬುವದೇ. ಇಂಥಾ ಹೃದಯದ ಆನಂದವನ್ನೂ ಮಹಿಮೆಯನ್ನೂ ಯೋಗ್ಯವಾಗಿ ವರ್ಣಿಸುವದು ಹ್ಯಾಗೆ? ಹಿಂದಿನ ಚಿತ್ರಗಳಲ್ಲಿ ಕಾಣಿಸಿದ ದುಷ್ಟ ಮೃಗಗಳ ಒಡ್ಡು ಕಾಣದೆ ಹೋಗಿದೆ. ದಿವ್ಯ ಸದ್ಗುಣಗಳ ಸಾಮ್ಯಗಳಾದ ಜ್ವಾಲೆಗಳು ಹೃದಯದಲ್ಲಿ ಪ್ರಬಲವಾಗಿ ಉರಿಯುತ್ತವೆ. ಮುಂಚೆ ಹೃದಯದಲ್ಲಿ ಹೊಕ್ಕೊಂಡಿದ ಸೈತಾನನು ಕೋಪಿಷ್ಟನಾಗಿ ಓಡಿ ಹೋಗುತ್ತಾನೆ. ಪರಲೋಕದಿಂದ ಇಳಿದು ಬಂದ ದೇವದೂತನು ಆಧಾರ ಕೊಟ್ಟು ಸೇವಿಸುತ್ತಾನೆ. ಎಲಾ ಭಕ್ತರೇ, ಮೊದಲು ನಮ್ಮನ್ನು ಪ್ರೀತಿ ಮಾಡಿದವನನ್ನು ಪ್ರೀತಿ ಮಾಡುವಾ! (೧ ಯೋಹಾ. ೪, ೧೬.) ಕರ್ತನ ಸಂಗಡ ಕೂಡುವವನು ಒಂದೇ ಆತ್ಮವಾಗಿದ್ದಾನೆ; (೧ ಕೊರಿ. ೬, ೧೭.) ಕರ್ತನಲ್ಲಿ ವಿಶ್ವಾಸವಿಡುವವನಿಗೆ ನಿತ್ಯಜೀವ ಉಂಟು; (ಯೋಹಾ. ೬, ೪೭.) ಅವನ ಹೃದಯವು ಪರಲೋಕಗಳಲ್ಲಿ ಇದ್ದು, (ಮತ್ತಾ. ೬, ೨೧.) ಆನಂದಭರಿತವಾಗಿದೆ.



## ಪ್ರಾರ್ಥನೆಯು.

ಅಮಿತ ಪ್ರೀತಿಗೆ ಯೋಗ್ಯನಾದ, ಪರಿಶುದ್ಧ ದೇವರಾದಂಥ, ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯಾಗಿರುವಂಥ, ನಮ್ಮ ತಂದೆಯೇ, ನೀನು ಮನುಷ್ಯರನ್ನು ಎಷ್ಟೋ ಪ್ರೀತಿ ಮಾಡುತ್ತೀ! ಬಡ ಪಾಪಿಯಾದ ನನ್ನನ್ನು ಎಷ್ಟೋ ಪ್ರೀತಿ ಮಾಡಿ, ಆನಂದ ಪಡಿಸಿ, ನಿನ್ನ ಮಗನಾದ ಯೇಸು ಕ್ರಿಸ್ತನಿಂದ ಪರಮ ಸುಖವನ್ನು ನನಗೆ ಕೊಟ್ಟೀ. ಇದಲ್ಲದೆ ಪರಿಶುದ್ಧಾತ್ಮದ ಮುಖಾಂತ್ರ ನನ್ನಲ್ಲಿ ವಾಸ ಮಾಡ ಬೇಕೆಂದಿದ್ಧೀ ಎಂಬುವದು ಅತ್ಯಾಶ್ಚರ್ಯವಾಗಿದೆ. ನೀನು ನನ್ನಲ್ಲಿಯೂ ನಾನು ನಿನ್ನಲ್ಲಿಯೂ ನೆಲೆಯಾಗಿದ್ದರೆ, ನಿನ್ನ ಸಂಬಂಧದಲ್ಲಿಯೂ ಐಕ್ಯದಲ್ಲಿಯೂ ಇರುವದು ನನಗೆ ನಿತ್ಯಜೀವವಾಗಿದೆ. ದೇವರ ಸಮಸ್ತ ಸಂಪೂರ್ಣತೆಯಿಂದ ನಾನು ಸಂಪೂರ್ಣನಾಗ ಬೇಕೆಂಬದು ನಿನ್ನ ಚಿತ್ತವಾಗಿದೆಂದು ತಿಳಕೊಂಡು, (ಎಫೆ. ೩, ೧೯.) ಪೂರ್ಣ ಆತ್ಮದಿಂದಲೂ ಪೂರ್ಣ ಹೃದಯದಿಂದಲೂ ಪೂರ್ಣ ಬಲದಿಂದಲೂ ನಿನ್ನನ್ನು ಪ್ರೀತಿ ಮಾಡದೆ ಇರ ಬಹುದೋ? ಆದದರಿಂದ ಪೂರ್ಣ ಪ್ರೀತಿಯನ್ನು ನನಗೆ ಕೊಟ್ಟು, ನೀನು ಪ್ರೀತಿಯಾಗಿರುವ ಪ್ರಕಾರ, ನಾನೂ ಪ್ರೀತಿಯಾಗುವ ಹಾಗೆ ಮಾಡು. ನೀನು ನನಗೆ ನಿತ್ಯ ಸಮೀಪವಾಗಿ ಇರುತ್ತೀ ಎಂಬ ಅನುಭವದಿಂದ ನಿನ್ನ ಪೂರ್ಣ ಐ

ಕ್ಯದಲ್ಲಿ ಹೆಚ್ಚು ಹೆಚ್ಚಾಗಿ ನನ್ನನ್ನು ಶೇರಿಸು. ಯಾವ ಆತಂಕವಾದರೂ ನಿನ್ನ ಪ್ರೀತಿಯಿಂದ ನನ್ನನ್ನು ತೊಲಗಿಸದೆ ಇರಲಿ. ನನ್ನ ಹೃದಯವು ನಿನಗೆ ನಿತ್ಯ ಆಲಯವಾಗಿರಲಿ. ನಾನು ನಿನ್ನನ್ನು ಮಾತ್ರ ಪ್ರೀತಿ ಮಾಡಿ, ನಿನಗೆ ಮಾತ್ರ ಅಂಟಿಕೊಂಡು, ನಿನ್ನ ಹೊರ್ತು ಸರ್ವವನ್ನು ಅಲಕ್ಷ್ಯ ಮಾಡುವ ಹಾಗೆ, ನನ್ನ ಆತ್ಮವನ್ನು ನಿನ್ನ ಕೃಪೆಯ ಐಕ್ಯದಲ್ಲಿ ಪೂರ್ಣವಾಗಿ ಶೇರಿಸು. ಸರ್ವದರಲ್ಲಿ ನಿನ್ನನ್ನು ಹುಡುಕಿ, ಸರ್ವದರಲ್ಲಿ ನಿನ್ನನ್ನು ಕಂಡು ಕೊಂಡು, ನಿನಗೋಸ್ಕರ ಸರ್ವವನ್ನು ಮಾಡಿ, ಸೈರಿಸಿ, ನೀನೇ ನನ್ನ ಸರ್ವವೆಂದು, ಆನಂದವಾಗಿದ್ದೇನೆ. ನೀನೇ ನನ್ನ ಹೃದಯದ ದೇವರೂ ನೀನೇ ನನ್ನ ನಿತ್ಯ ಭಾಗ್ಯವೂ ಆಗಿದ್ದೀ. ಆಮೆನ್.

## ೬. ಚಿತ್ರ.

ಈ ಚಿತ್ರದಲ್ಲಿ ಮಾನಸಾಂತರವನ್ನೂ ವಿಶ್ವಾಸವನ್ನೂ ಮರೆಯುಲಾರಂಭಿಸುವ ಹೃದಯದ ಗಂಡಾಂತರವು ತೋರುತ್ತದೆ.

ಈ ಚಿತ್ರವನ್ನು ಚನ್ನಾಗಿ ನೋಡಿದರೆ, ಕಾಣುವದೇನಂದರೆ: ಕಳೆಗುಂದಿದ ಮುಖವು ಮನಸ್ಸಿನಲ್ಲಿ ತೊಡಗಿದ ಕರಕರೆಗೆ



ಗುರ್ತಾಗಿದೆ. ಹೃದಯದಲ್ಲಿರುವ ನಕ್ಷತ್ರದ ಕಾಂತಿಯ ನ್ಯೂನತೆಯು ನಿತ್ಯ ಜೀವದ ಆಶೆ ಕುಂದಿತೆಂಬುವದಕ್ಕೆ ಗುರ್ತಾಗಿದೆ. ಮೊಬ್ಬಾದ ಕ್ರೂಜೆಯ ರೂಪವು ಕ್ರೂಜಿತನಾದ ಯೇಸು ಕ್ರಿಸ್ತನ ನೆನಪು ಕ್ಷೀಣವಾಯಿತೆಂಬುವದಕ್ಕೆ ಗುರ್ತಾಗಿದೆ. ಪಾತ್ರೆಯೂ ರೊಟ್ಟಿಯೂ ಮಾಸಿ ಹೋಗುವದು ಯೇಸು ಕ್ರಿಸ್ತನ ಆಜ್ಞೆಯ ಪ್ರಕಾರ ಒಂದೇ ರೊಟ್ಟಿಯನ್ನೂ ಒಂದೇ ದ್ರಾಕ್ಷೇ ರಸವನ್ನೂ ಅನುಭವಿಸಿ ಐಕ್ಯವಾಗಿರುವ ಭಕ್ತರ ಹೊಕ್ಕಬಳಿಕೆ ಕಡಿಮೆಯಾಯಿತೆಂಬುವದಕ್ಕೆ ಗುರ್ತಾಗಿದೆ. ಹೃದಯದಲ್ಲಿರುವ ಜ್ವಾಲೆಗಳು ಕುಂದುವದು ಮುಂಚೆ ಇದ್ದ ಮಾನಸಾಂತರ ಪ್ರೀತಿ ವಿಶ್ವಾಸ ಆಸಕ್ತಿಗಳ ಬಲವು ಅಳಿಯುವದೆಂಬದಕ್ಕೆ ಗುರ್ತಾಗಿದೆ. ಹೃದಯವು ಈ ಸ್ಥಿತಿಯಲ್ಲಿರುವದರಿಂದ ಸಮಾಧಾನವೂ ಸಂತೋಷವೂ ಧೈರ್ಯವೂ ಕೆಡುತ್ತವೆ. ಮೇಲ್ಮೂಲೆಯಲ್ಲಿ ಕಾಣುವ ಕರೇ ಮೋಡವು ದೇವರ ಕೃಪೆಯನ್ನು ವಿಸರ್ಜಿಸುವವರಿಗೆ ಬರುವ ಶಿಕ್ಷೆಗೆ ಗುರ್ತಾಗಿದೆ. ಇಂಥವರ ಗುಟ್ಟನ್ನು ಮುಂಚೆ ಓಡಿ ಹೋಗಿದ್ದಂಥ ಸೈತಾನನು ತಿಳುಕೊಂಡು, ಏಳು ಪಿಶಾಚಿಗಳನ್ನು ಕರದು, ಹೃದಯದಿಂದ ಹೊರಗಾದ ದುರ್ಗುಣಗಳೆಂಬ ಮೃಗಗಳ ಸಹಿತವಾಗಿ ತನ್ನ ಮುಂಚಿನ ನಿವಾಸಕ್ಕೆ ಕಳುಹಿಸಿ, ಕಳಕೊಂಡ ಮನುಷ್ಯಹೃದಯವೆಂಬ ತನ್ನ ರಾಜ್ಯವನ್ನು ಪು

ನಹ ಸ್ವತಂತ್ರಿಸಿ ಕೊಳ್ಳಲಿಕ್ಕೆ ಯತ್ನ ಮಾಡುತ್ತಾನೆ. ಮನುಷ್ಯನು ತನ್ನ ಮುಂಚಿನ ಸುಖ ಹೋಗುವದೆಂದೂ, ಪಾಪದ ದುರಾಶೆಗಳು ಹೃದಯದಲ್ಲಿ ಬಲಗೊಳ್ಳುತ್ತವೆಂದೂ, ತಿಳುಕೊಂಡರೂ, ಪ್ರಾರ್ಥನೆಯ ಅಭ್ಯಾಸವು ನೀಗಿ ಹೋದದರಿಂದ, ಸೈತಾನನ ಸಂಗಡ ಯುದ್ಧ ಮಾಡುವದಕ್ಕೆ ಅಶಕ್ತನಾಗಿದ್ದಾನೆ. ಆದರೆ ಮೋಸ ಹೋಗುವ ಬಡ ಪಾಪಿಯು ತನ್ನ ಸ್ಥಿತಿಯನ್ನು ನಿಜವಾಗಿ ತಿಳಿಯದೆ, ತನ್ನನ್ನು ಎಚ್ಚರಿಸುವ ದೂತನ ಶಬ್ದವನ್ನು ಕೇಳದೆ, ಸೈತಾನನ ಮಾಟಗಳಿಗೆ ಒಳಬೀಳುತ್ತಾನೆ. ಮುಂಚೆ ಹೇಳಿದ ಪ್ರಕಾರ ದೇವದೂತನು ದೇವರ ಕೃಪೆಗೆ ಗುರ್ತಾಗಿದ್ದಾನೆ. ಅದು ಮನುಷ್ಯನನ್ನು ಎಚ್ಚರಿಸುವ ಅಪೇಕ್ಷೆಯಿಂದ ಹೇಳುವದೇನಂದರೆ: ನಿದ್ದೆ ಮಾಡುವವನೇ, ಎಚ್ಚರವಾಗು; ಶೋಧನೆಯಲ್ಲಿ ಬೀಳದ ಹಾಗೆ ಎಚ್ಚತ್ತು ಪ್ರಾರ್ಥನೆ ಮಾಡು; ದೇವರ ವಾಕ್ಯವನ್ನು ಓದು; ನಿನಗೋಸ್ಕರ ಕ್ರೂಜೆ ತಾಳಿದ ಯೇಸು ಕ್ರಿಸ್ತನನ್ನು ನೆನಸು; ಆತನು ನಿನಗೋಸ್ಕರ ತಾಳಿದ ಶ್ರಮೆಗಳನ್ನು ಧ್ಯಾನಿಸು; ಭಕ್ತರ ಸಲಿಗೆಗೆ ಆಸಕ್ತನಾಗಿದ್ದು, ವಿಶ್ವಾಸಿಗಳ ಐಕ್ಯವನ್ನು ಬಿಡದೆ, ಜೀವದ ಮಾರ್ಗವನ್ನು ಹಿಡಿ. ಆದರೆ ತಿರಿಗಿ ಪ್ರಪಂಚಕ್ಕೆ ಮೆಚಿಮರುಳಾದ ಮನುಷ್ಯನು ಕೃಪೆಯ ಬೋಧನೆ ಕೇಳಿದರೂ, ಒಡಂಬಡುವದಿಲ್ಲ. ಮತ್ತು ದೂತನು ಮನುಷ್ಯನನ್ನು ಗದರಿಸಿ,

ಎಲಾ ಮೂಢನೇ, ನಿನಗೆ ಬಂದ ಗಂಡಾಂತರವನ್ನು ನೀನು ಯೋಚಿಸುವದಿಲ್ಲವೋ? ನೀನು ನಿದ್ದೆ ಮಾಡಿದರೆ ನಿನಗೆ ಮೋಸವಾದೀತಲ್ಲವೋ? ನೀನು ಜೈಸಿದ ಶತ್ರುಗಳಾದ ದುರ್ಗುಣಗಳು ತಿರಿಗಿ ನಿನ್ನಲ್ಲಿ ಶೇರುವವೆಂದು ತಿಳುಕೊಳ್ಳುವದಿಲ್ಲವೋ? ನಿನ್ನನ್ನು ಬಿಟ್ಟು ಹೋದ ಸೈತಾನನು ತಿರಿಗಿ ನಿನಗೆ ಠಕ್ಕು ಮಾಡ್ಯಾನೆಂದು, ನೀನು ಭಯ ಪಡುವದಿಲ್ಲವೋ? ನೀನು ಕರ್ತನಲ್ಲಿ ಐಕ್ಯವಾಗಿದ್ದರೇ ಹೊರ್ತು ನಿನ್ನಲ್ಲಿ ತ್ರಾಣವಿಲ್ಲವೆಂದೂ, ನಿನ್ನ ಹೃದಯವನ್ನು ಕಾಪಾಡಿದರೇ ಹೊರ್ತು ಅದು ಪಾಪದಿಂದ ಕೆಟ್ಟು ಹೋಗುವದೆಂದೂ, ಅರಿಯೆಯಾ? ಆದರೆ ಸೈತಾನನ ಮೋಸಕ್ಕೂ ಸ್ವಭಾವದ ದುರಾಶೆಗಳಿಗೂ ವಶವಾದ ಮನುಷ್ಯನು ತಾನು ಕೃಪೆಯನ್ನು ಹೊಂದಿದವನೆಂದೂ, ತಕ್ಕ ಕಾಲದಲ್ಲಿ ಗುಣವಾಗುವೆನೆಂದೂ, ಗದರಿಕೆಯ ಮಾತು ಕೇಳಲೊಲ್ಲದೆ, ಅಲಕ್ಷ್ಯ ಮಾಡುತ್ತಾನೆ.

ಮತ್ತು ದೂತನು ಮನುಷ್ಯನನ್ನು ಹೆದರಿಸಿ, ಹೇಳುವದೇನಂದರೆ—ಐಯ್ಯೋ, ಕರ್ತನ ಚಿತ್ತವನ್ನು ಮೀರುವ ದ್ರೋಹಿಯೇ, ನೀನು ರಕ್ಷಣೆ ಹೊಂದುವದು ಹ್ಯಾಗೆ? ನಿನಗೋಸ್ಕರ ಸತ್ತ ನಿನ್ನ ರಕ್ಷಕನನ್ನು ಮರತು ಬಿಡುತ್ತೀಯೋ? ಮುಂಚೆ ವಿಸರ್ಜಿಸಿದ ಪಾಪಗಳನ್ನು ಈಗ ತಿರಿಗಿ ಅಂಗೀಕರಿಸುತ್ತೀಯೋ? ಮುಂಚೆ ನಿನ್ನಲ್ಲಿದ್ದ ಮಾನಸಾಂತರವೂ ವಿಶಾ

ಸವೂ ಪ್ರೀತಿಯೂ ಕಾಣದೆ ಹೋದವೋ? ಗಿಡಗನು ಮೇಲೆ ಸುತ್ತ್ಯಾಡುವ ಸಮಯದಲ್ಲಿ ತಾಯಿಯ ರೆಕ್ಕೆಯೊಳಗೆ ಶೇರದ ಕೋಳೀ ಮರಿಯಂತೆ ನಿನ್ನನ್ನು ಕೃಪೆಯಿಂದ ಕರೆಯುವ ನಿನ್ನ ರಕ್ಷಕನ ಆಶ್ರಯವನ್ನು ತಿರಸ್ಕರಿಸಿ, ವ್ಯರ್ಥವಾಗಿ ಜೀವವನ್ನು ಕಳ ಕೊಳ್ಳುತ್ತೀಯೋ? ಮುಂಚಿನ ಸಮಾಧಾನವನ್ನು ನೆನಸಿ ಕೊಂಡು, ಬೇಗ ಮಾನಸಾಂತರ ಪಟ್ಟವನಾಗಿ, ದೇವರ ಕಡೆಗೆ ತಿರಿಗಿ ಕೊಳ್ಳದಿದ್ದರೆ, ನಿತ್ಯ ನಾಶನದಲ್ಲಿ ಬೀಳಿಸುವ ಗಂಡಾಂತರವು ನಿನಗೆ ಇರುವದು. ಆದರೆ ಸೈತಾನನ ಮಾಟದಿಂದ ಭ್ರಮೆಗೊಂಡ ಪಾಪಿಯು ಕೃಪೆಯ ಮಾತು ತಿರಸ್ಕರಿಸಿ, ಅವಿಧೇಯತ್ವದಲ್ಲಿ ದೃಢವಾಗಿದ್ದಾನೆ. ಪ್ರಿಯ ಮನುಷ್ಯನೇ, ನೀನು ಮೇಲೆ ಬರದ ಸ್ಥಿತಿಯಲ್ಲಿದ್ದರೆ, ನಿನ್ನನ್ನು ಎಚ್ಚರಿಸಿ ಕೊಂಡು, ಮನಃಪೂರ್ವಕವಾಗಿ ಪ್ರಾರ್ಥನೆ ಮಾಡು.

---

## ಪ್ರಾರ್ಥನೆಯು.

ಇಂಗಿತಜ್ಞನಾದ ಕರುಣೆಯುಳ್ಳ ನನ್ನ ರಕ್ಷಕನೇ, ನಾನು ಹೊಂದಿದ ಕೃಪೆಯನ್ನು ಕಳ ಕೊಳ್ಳದ ಹಾಗೆ, ನನ್ನನ್ನು ಕಾಪಾಡು. ನನ್ನ ಹೃದಯವನ್ನು ನಿನ್ನ ಕೃಪೆಯ ಆತ್ಮದ

ಮುಖಾಂತ್ರ ವಿಚಾರಿಸು. ನಾನು ತಿರಿಗಿ ಪಾಪದ ನಿದ್ದೆಯಲ್ಲಿ ಬೀಳದ ಹಾಗೆ, ನನ್ನನ್ನು ಎಚ್ಚರಿಸು. ನಾನು ಬಲಹೀನನೆಂದೂ, ನನ್ನ ಹೃದಯವು ಚಂಚಲವೆಂದೂ, ಪ್ರೀತಿಯು ನನ್ನಲ್ಲಿ ಬೇಗ ತಣ್ಣಗಾಗುವದೆಂದೂ, ನನ್ನಲ್ಲಿರುವ ವಿಶ್ವಾಸವು ಶೀಘ್ರ ಕ್ಷೀಣವಾಗುವದೆಂದೂ, ನಿನಗೆ ಗೊತ್ತಾಗಿದೆ. ಪಾಪವೂ ಪ್ರಪಂಚವೂ ನನ್ನ ಸ್ವಭಾವದ ಮನಸ್ಸಿಗೆ ಬಹಳ ಹಿತವಾಗಿವೆಂದೂ, ದೇವರಚಿತ್ತವನ್ನು ಅನುಸರಿಸುವದಕ್ಕಾಗಿ ಸ್ವಚಿತ್ತವನ್ನು ತ್ಯಜಿಸಿ ದೇವರ ಸೇವೆಗೋಸ್ಕರ ಕಷ್ಟಾಯಾಸಗಳನ್ನು ತಾಳುವದು ನನ್ನ ಹೃದಯಕ್ಕೆ ಅಸಹ್ಯವಾಗಿದೆಂದೂ, ನಿನಗೆ ತಿಳಿದದೆ. ನನ್ನನ್ನು ಬದುಕಿಸಿ, ಬಲಗೊಳ್ಳಿಸು. ನನ್ನನ್ನು ಎಚ್ಚರಿಸಿ, ದೃಢ ಪಡಿಸು. ನನ್ನಲ್ಲಿ ಶ್ರಾಣವೇನೂ ಇಲ್ಲ; ನನ್ನನ್ನು ಬಿಟ್ಟುಬಿಡ ಬೇಡ, ನಿನ್ನ ಕೈ ತೊಲಗಿಸ ಬೇಡ, ನನ್ನ ರಕ್ಷಣೆಯ ದೇವರೇ! ನೀನು ನನ್ನನ್ನು ಹಿಡಿಯದಿದ್ದರೆ, ನಾನು ನಿನ್ನ ಐಕ್ಯದಲ್ಲಿ ನಿಲ್ಲಲಾರೆನು. ನನ್ನಲ್ಲಿರುವ ಬೆಳಕು ಅಳಿಯದ ಹಾಗೆಯೂ, ಪ್ರೀತಿಯು ತಣ್ಣಗಾಗದ ಹಾಗೆಯೂ, ನಂಬಿಕೆಯು ಚಂಚಲವಾಗದ ಹಾಗೆಯೂ, ವಿಶ್ವಾಸವು ನಾಶವಾಗದ ಹಾಗೆಯೂ, ನಿನ್ನ ಕೃಪೆಯನ್ನು ನನಗೆ ಕೊಡು. ಅನುದಿನವು ಸತ್ಯದಿಂದಲೂ ಆತ್ಮದಿಂದಲೂ ಪ್ರಾರ್ಥನೆ ಮಾಡುವದಕ್ಕೆ ಹೊಸ ಶ್ರಾಣವನ್ನೂ ಆಸಕ್ತಿಯನ್ನೂ ನನಗೆ ದಯ ಮಾಡು. ನಿನ್ನನ್ನು

ನಂಬಿ, ಪ್ರೀತಿ ಮಾಡಿ, ನಿತ್ಯ ಧ್ಯಾನಿಸುವದಕ್ಕೆ ಬೇಕಾದ ದೃಢವನ್ನು ನನಗೆ ಕೊಡು. ನನ್ನ ಮನೋದೃಷ್ಟಿಯು ಎಡೆಬಿಡದೆ ನಿನ್ನಲ್ಲಿರುವ ಹಾಗೆಯೂ, ನಿನ್ನ ಶ್ರಮೆಗಳ ನೆನಪು ನನ್ನ ಹೃದಯದಿಂದ ಅಗಲದ ಹಾಗೆಯೂ, ನನ್ನ ಬುದ್ಧಿಯನ್ನು ಸ್ಥಿರಗೊಳಿಸು. ಲೋಕದ ಮಾಯಾಡಂಭಗಳನ್ನು ನೋಡಿ ಭ್ರಮೆಗೊಳ್ಳದ ಹಾಗೆ, ನನ್ನ ಕಣ್ಣುಗಳನ್ನು ತಿರುಗಿಸು. ನನಗೆ ಕಿವಿ ಕೊಡು, ಕರ್ತನೇ; ನನ್ನ ರಕ್ಷಕನೇ, ನನ್ನನ್ನು ರಕ್ಷಿಸು. ಆಮೆನ್.

## ೭. ಚಿತ್ರ.

ಈ ಚಿತ್ರದಲ್ಲಿ ಮಾನಸಾಂತರ ಪಟ್ಟ ಮೇಲೆ ತಿರಿಗಿ ಬೇಕೆಂದು ಪಾಪದಲ್ಲಿ ಸೇರಿ, ಪಾಪಕ್ಕೂ ಸೈತಾನನಿಗೂ ಪೂರ್ಣ ವಶವಾಗುವ ಮನುಷ್ಯನ ಸ್ಥಿತಿಯು ಬರದದೆ.

ಅಶುದ್ಧಾತ್ಮವು ಮನುಷ್ಯನನ್ನು ಬಿಟ್ಟು ಹೊರಟಾಗ, ನೀರಿಲ್ಲದ ಸ್ಥಳಗಳಲ್ಲಿ ತಿರುಗಾಡಿ, ವಿಶ್ರಾಂತಿ ಹುಡುಕುವದು; ಅದು ಕಾಣದೆ ಇರುವದರಿಂದ—ನಾನು ಹೊರಟು ಬಂದ ನನ್ನ

ಮನೆಗೆ ತಿರುಗುವೆನೆಂದು ಹೇಳಿ, ಬಂದು, ಆ ಮನೆ ಗುಡಿಸಿ ಅಲಂಕರಿಸಿ ಇರುವದನ್ನು ನೋಡುವದು; ತರುವಾಯ ಹೋಗಿ, ತನಗಿಂತ ಕೆಟ್ಟ ಬೇರೆ ಏಳು ಆತ್ಮಗಳನ್ನು ಕರಕೊಂಡು ಬರುವದು; ಅವು ಪ್ರವೇಶಿಸಿ, ಅಲ್ಲಿ ವಾಸ ಮಾಡುವವು; ಆದದರಿಂದ ಆ ಮನುಷ್ಯನ ಅಂತ್ಯವು ಆರಂಭಕ್ಕಿಂತ ಕೆಟ್ಟದ್ದಾಗುವದೆಂದು, ಯೇಸು ಕ್ರಿಸ್ತನು ಹೇಳಿದ ಪ್ರಕಾರ, ಈ ಚಿತ್ರದಲ್ಲಿ ಬರದಿರುವ ಮನುಷ್ಯನ ಸ್ಥಿತಿ ಇರುವದು.

ರಕ್ಷಕನಾದ ಯೇಸು ಕ್ರಿಸ್ತನಲ್ಲಿ ಎಲ್ಲಾ ಮನುಷ್ಯರಿಗೆ ಪ್ರಕಟವಾಗುವ ದೇವರ ಪ್ರೀತಿಯನ್ನು ತಿಳಕೊಂಡ ಬಳಿಕ, ಅವಿಶ್ವಾಸದಿಂದ ಅದನ್ನು ತಿರಸ್ಕರಿಸಿದ ಮನುಷ್ಯನ ಮೇಲೆ ಸೈತಾನನು ಪೂರ್ಣ ಧೊರೆತನ ನಡಿಸುತ್ತಾನೆ. ಪರಿಶುದ್ಧಾತ್ಮದ ಆಲಯವೆಂದು ಕಾಣಿಸಿದ ಹೃದಯವು ಸೈತಾನನ ಗುಡಿಯಾಗಿದೆ. ಮುಂಚಿನ ಪಾಪಗಳು ಪುನಹ ಮನುಷ್ಯನನ್ನು ಸ್ವಾಧೀನ ಮಾಡಿ ಕೊಂಡವೆ. ಈ ಕೇಡಿಗೆ ಕಾರಣವೇನಂದರೆ: ಮನುಷ್ಯನು ಹೊಂದಿದ ಕೃಪೆಯನ್ನು ಅಲಕ್ಷ್ಯ ಮಾಡಿ, ಹಿಂದಿನ ಪಾಪಗಳ ವಿಮೋಚನೆಯನ್ನು ಮರತು, ಭಕ್ತಿಯ ಪರಿಶುದ್ಧ ಅಭ್ಯಾಸದಲ್ಲಿ ಮಾಡಿದ ಆಲಸ್ಯವೇ. ಭಕ್ತಿಯ ಮಾರ್ಗದಲ್ಲಿ ಮುನ್ನಡೆಯದವನು ಹಿಂದೆ ಬೀಳುತ್ತಾನೆ; ಇದ್ದಲ್ಲಿ ನಿಲ್ಲಲಾಗದು. ಬಹು ಜಾಗ್ರತೆಯಿಂದ ಹೋರಾ

ಡದವನು ಇಕ್ಕಟ್ಟಾದ ಬಾಗಲಲ್ಲಿ ಶೇರಲಾರನು; ಮುಂದಿಟ್ಟ
ನಾಗಿ ಇರುಬಿನ ಹಾದಿಯಲ್ಲಿ ನಡಿಯದವನು ಬೀಳುವನು.
ಪಾಪದ್ವೇಷದಲ್ಲಿಯೂ, ಪ್ರಪಂಚ ತಿರಸ್ಕಾರದಲ್ಲಿಯೂ, ದು
ರಾಶೆಯ ಜಯದಲ್ಲಿಯೂ ಗಂಡಾಂತರದ ಭಯದಲ್ಲಿಯೂ
ಚುರುಕಿಲ್ಲದವನು ಸೈತಾನನ ಬೋನಿನಲ್ಲಿ ಬಿದ್ದು, ಪಾಪದ
ಉರುಳಿನಲ್ಲಿ ಶಿಕ್ಕಿ, ಪ್ರಪಂಚ ಮಾಯೆಯ ಕೊಳಚಿಯಲ್ಲಿ ಮು
ಣುಗುವನು. ನಾಯಿಯು ತಾನು ಕಾರಿದ್ದಕ್ಕೂ ತೊಳದ ಹಂ
ದಿಯು ಕೆಸರಿನ ಹೊರಳಾಟಕ್ಕೂ ತಿರುಗುವದೆಂಬ ಗಾದೆಯ
ಹಾಗೆ (೨ ಪೇತ್ರ. ೨, ೨೨.) ಲಘು ಮನಸ್ಸುಳ್ಳ ಮನುಷ್ಯ
ನು ಹಿಂದಿನ ದುರ್ಮಾರ್ಗದಲ್ಲಿ ತಿರಿಗಿ ಶೇರುತ್ತಾನೆ.

ಏಳನೆ ಚಿತ್ರದಲ್ಲಿ ಈ ಅಭಿಪ್ರಾಯ ಹ್ಯಾಗೆ ತೋರುವ
ದಂದರೆ: ಪರಿಶುದ್ಧಾತ್ಮಕ್ಕೆ ಗುರ್ತಾದ ಪಾರಿವಾಳವು ವೇಗದಿಂ
ದ ಮೇಲೆ ಹಾರುವದು; ಅದೇನಂದರೆ, ಅಶುದ್ಧತ್ವಕ್ಕೆ ತಿರುಗಿದ
ಮನುಷ್ಯನ ಹೃದಯದಲ್ಲಿ ಪರಿಶುದ್ಧಾತ್ಮವು ವಾಸ ಮಾಡಲಾ
ರದು. ಸೈತಾನನ ಆಲಯವಾದ ಹೃದಯವು ದೇವರ ಆಲಯ
ವಾಗಿರ ಕೂಡದು. ದೇವರ ಕೃಪೆಗೆ ಗುರ್ತಾದ ದೇವದೂತನು
ಮನುಷ್ಯನ ಮೇಲೆ ಕರುಣ ಮಾಡಿ, ದುಃಖ ಪಟ್ಟು, ಹೋ
ಗುತ್ತಾನೆ. ಹೋಗುತ್ತಾ ಹೇಳುವದೇನಂದರೆ: ಬಡ ಪಾಪಿ
ಯೇ, ನಿನ್ನ ಸಮಾಧಾನಕ್ಕೆ ಉಪಯೋಗವಾದದ್ದನ್ನು ನೀ

ನು ತಿಳುಕೊಂಡರೆ, ಎಷ್ಟೋ ಒಳ್ಳೇದು; ನಿನ್ನ ತಂದೆಯಾಗಿರುವ ದೇವರು ನಿನ್ನ ಮೇಲೆ ಪ್ರೀತಿ ಇಡುತ್ತಾನೆಂದು, ತಿಳುಕೋ; ನಿನಗೋಸ್ಕರ ತನ್ನ ಪ್ರಾಣವನ್ನು ಕೊಟ್ಟ ನಿನ್ನ ರಕ್ಷಕನು ನಿನ್ನನ್ನು ರಕ್ಷಿಸಲಿಕ್ಕೆ ಮನಸ್ಸಾಗಿದ್ದಾನೆಂದು, ನಂಬು; ನೀನು ಎಷ್ಟು ದ್ರೋಹ ಮಾಡಿದ್ದರೂ, ಎಲ್ಲಾ ಪಾಪಿಗಳಿಗಿಂತ ನೀನು ಕೆಟ್ಟವನಾಗಿದ್ದರೂ, ನೀನು ವಿಶ್ವಾಸಿಸಿದರೆ, ಕರುಣೆಯನ್ನು ಹೊಂದಿ, ಶಿಕ್ಷೆಯಿಂದ ಬಿಡುಗಡೆಯಾಗಿ, ದೇವರಿಗೆ ಪ್ರಿಯ ಮಗುವಾಗಿರುವಿ; ಆದರೆ ಪ್ರಪಂಚಕ್ಕೂ ಪಾಪಕ್ಕೂ ಮೆಚ್ಚುವ ಮನುಷ್ಯನು ಕೃಪೆಯ ಮಾತು ನಂಬದೆ, ದೇವರ ಪ್ರೀತಿ ತೀರಿತೆಂದು ನೆನಸಿ, ತಾನು ಗತಿ ಇಲ್ಲದವನೆಂದು ನಿರಾಶೆಯಾಗಿ, ಪಾಪದ ಮಾರ್ಗದಲ್ಲಿ ಮುಂದರಿದು, ತನ್ನ ಹೃದಯದ ಸ್ಥಿತಿಯನ್ನು ವಿಚಾರಿಸಲೊಲ್ಲದೆ, ಕಣ್ಣು ಮುಚ್ಚಿಕೊಂಡು, ಕುಣಿಯಲ್ಲಿ ಹಾರುವವನ ಹಾಗೆ, ನಿತ್ಯ ನಾಶನದ ಗುಂಡಿಯಲ್ಲಿ ಬೀಳುತ್ತಾನೆ.

ಹೃದಯದ ನಕ್ಷತ್ರವು ಕಪ್ಪಾಗಿರುವದೇನಂದರೆ: ಮಾನಸಾಂತರಕ್ಕೆ ಬೇಕಾಗಿರುವ ವಿಶ್ವಾಸವನ್ನು ತಳ್ಳಿ, ಸೈತಾನನ ಮೋಸದ ಬೋಧನೆಯನ್ನು ಅಂಗೀಕರಿಸಿ, ದೇವರಿಗೆ ತಿರಿಗಿಬಿದ್ದ ಮನುಷ್ಯನ ಹೃದಯದಲ್ಲಿ ನಿತ್ಯ ಜೀವದ ಆಶೆಯು ಇಲ್ಲದೆ ಹೋಗುವದು.

ಮುಂಚೆ ಹೃದಯದಲ್ಲಿದ್ದ ಮೃಗಗಳು ಪಿಶಾಚಿಗಳ ಸಹಿತವಾಗಿ ತಿರಿಗಿ ಅದರಲ್ಲಿ ಶೇರಿ, ಹೆಚ್ಚಾದ ಧೈರ್ಯವನ್ನೂ ಕ್ರೂರತ್ವವನ್ನೂ ತೋರಿಸುವದೇನಂದರೆ: ಪೂರ್ವದಲ್ಲಿ ಮನುಷ್ಯನ ಮನಸ್ಸಿನೊಳಗೆ ಬಳಿಕೆಯಾಗಿದ್ದ ಪಾಪಗಳು ಹೊಸ್ತಾಗಿ ಬಲಗೊಂಡು, ಹೆಚ್ಚಾದ ಧೀರತ್ವದಿಂದ ಪ್ರಕಟವಾಗುತ್ತವೆ.

ಸೈತಾನನು ಬಲಗೈಯಲ್ಲಿ ಗದೆ ಹಿಡಿದು, ತಲೆಗೆ ರಾಜಕಿರೀಟವಿಟ್ಟು ಕೊಂಡು, ಪಿಶಾಚಿಗಳಾದ ಏಳು ಮಂತ್ರಿಗಳ ನಡುವೆ ರಾಜಸಿಂಹಾಸನದಲ್ಲಿ ಕೂತಿರುವದೇನಂದರೆ: ಯೇಸು ಕ್ರಿಸ್ತನ ಕೃಪೆಯ ರುಚಿಯನ್ನು ನೋಡಿದ ತರುವಾಯ, ಅದನ್ನು ಅವಿಶ್ವಾಸದಿಂದ ತಿರಸ್ಕರಿಸಿದ ಮನುಷ್ಯನ ಮೇಲೆ ಸೈತಾನನು ಪೂರ್ಣ ಧೊರೆತನ ನಡಿಸಿ, ಗರ್ವದಿಂದ ತುಂಬಿ, ತನ್ನ ಚಿತ್ತವನ್ನೆಲ್ಲಾ ಅವನಲ್ಲಿ ಪೂರೈಸುತ್ತಾನೆ.

ಪ್ರಿಯ ಮನುಷ್ಯನೇ, ನೀನು ಮಾನಸಾಂತರವಾಗಿ ದೇವರ ಕಡೆಗೆ ತಿರುಗಿ ಕೊಂಡು, ಕೃಪೆಯನ್ನು ಹೊಂದಿ, ಪಾಪಪರಿಹಾರದ ಗುಟ್ಟು ತಿಳಿದು ಕೊಂಡ ಮೇಲೆ, ಪಾಪಕ್ಕೆ ಅಂಜದೆ ಮೆಚ್ಚಿ ತಿರಿಗಿ ಮೋಸ ಹೋದರೆ, ನಿನಗೂ ಹೀಗೆ ಆಗುವದು. ಮೊದಲಿನ ಸ್ಥಿತಿಗಿಂತ ಕಡೇ ಸ್ಥಿತಿ ಕೆಡುವದು. ಅದು ಕಾರಣ ನೀನು ವಿಸರ್ಜಿಸಿದ ಹಿಂದಿನ ಪಾಪಗಳಿಗೆ ತಿರುಗಿ ಕೊಳ್ಳುವದಕ್ಕೆ ಹೆದರು. ಕಾಮ ಕ್ರೋಧ ಲೋಭ ಮೋ

ಹ ಮದ ಮತ್ಸರ ಮೊದಲಾದವುಗಳಿಗೂ, ಪಾಪದ ಆದಿಗುರುವಾದ ಸೈತಾನನಿಗೂ ಹಗೆ ಮಾಡಿದ ಮೇಲೆ, ಪುನಹ ಶತ್ರುಗಳ ಸಂಗಡ ಸಂಧಿ ಮಾಡಿ ಕೊಂಡು, ನಾಶವಾಗ ಬಾರದು. ಕಠಿಣ ಮೋಸದಲ್ಲಿ ಶಿಕ್ಕಿ ಬಿದ್ದರೂ, ದೇವರನ್ನು ನಂಬು. ಆತನ ಪ್ರೀತಿಯೂ ಕೃಪೆಯೂ ಕುಂದಲಿಕ್ಕಿಲ್ಲ. ನಿನಗೆ ಸಹಾಯ ಮಾಡಿ, ಎಲ್ಲಾ ನಿನ್ನ ಶತ್ರುಗಳ ಮೇಲೆ ಜಯವನ್ನು ಕೊಟ್ಟು, ನಿನ್ನನ್ನು ರಕ್ಷಿಸುವದಕ್ಕೆ ಈಗಲೂ ಮನಸ್ಸಾಗಿಧ್ದಾನೆ. ನೀನು ತಪ್ಪು ಮಾಡಿದ್ದರೂ, ನಿನ್ನ ಪಾಪಗಳನ್ನು ಅರಿಕೆ ಮಾಡಿ, ಧೈರ್ಯವಾಗಿರು; ನೀನು ಮಾರ್ಗದಲ್ಲಿ ಬಿದ್ದಿದ್ದರೂ, ತಿರಿಗಿ ಎದ್ದು, ನಡಿ; ಯುದ್ಧದಲ್ಲಿ ಘಾಯ ಪಟ್ಟಿದ್ದರೂ, ಹೋರಾಡು, ಪಾಪವನ್ನೂ ಸೈತಾನನನ್ನೂ ಶೇರದೆ ನಿನ್ನ ರಕ್ಷಕನನ್ನು ಶೇರು. ಈತನು ಸರ್ವತ್ರಾಣಿಯಾಗಿದ್ದು, ನಿನಗೆ ಮಾಟಾ ಮಾಡಿ ಗೆದ್ದ ಸೈತಾನನನ್ನು ಗೆದ್ದು, ಕಟ್ಟಿ, ಸುಲಿದು ಕೊಂಡು, ನಿನ್ನನ್ನು ಬಿಡುಗಡೆ ಮಾಡುವನು. ಅಧೈರ್ಯವಾಗದೆ, ನಂಬಿ ಬದುಕು.



## ಪ್ರಾರ್ಥನೆಯು

ಎಲ್ಲಾ ಪಾಪಿಗಳಿಗಿಂತ ಕಡು ಕೆಟ್ಟವನಾದ ನಾನು ನಿತ್ಯ ನರಕಕ್ಕೆ ಪಾತ್ರವಾದ ನನ್ನ ದುಷ್ಟತ್ವವನ್ನು ಅರಿಕೆ ಮಾಡು

ತ್ತೇನೆ. ಪುನಹ ಜೀವವನ್ನು ಕಳಕೊಂಡವನಾಗಿದ್ಧೇನೆ. ಕೃಪೆಯ ರುಚಿಯನ್ನು ನೋಡಿ ಉಪೇಕ್ಷಿಸಿದೆನು. ಪ್ರೀತಿಯನ್ನು ಅನುಭವಿಸಿ ವಿಸರ್ಜಿಸಿದೆನು. ಪರಿಶುದ್ಧತ್ವವನ್ನು ಹೊಂದಿ ತಿರಸ್ಕರಿಸಿದೆನು. ಸೈತಾನನ ಮೋಸಗಳಿಂದ ಬಿಡುಗಡೆಯಾಗಿ, ಪಾಪಪರಿಹಾರವನ್ನು ಹೊಂದಿ, ಸುಖಿಯಾಗಿದ್ದು, ನನಗೋಸ್ಕರ ಕ್ರೂಜೆ ತಾಳಿದ ಯೇಸು ಕ್ರಿಸ್ತನ ವಿಶ್ವಾಸದಿಂದ ಸಮಾಧಾನವನ್ನು ಪಡೆದು, ಪರಿಶುದ್ಧಾತ್ಮದ ಉಪದೇಶದಿಂದ ಕೃಪೆಯ ಗುಟ್ಟು ತಿಳಕೊಂಡಿದ್ದೆನು; ಆದರೆ ಅತಿ ನೀಚ ದ್ರೋಹಿಯಾಗಿ, ನನಗಿದ್ದ ಸುಖವನ್ನೆಲ್ಲಾ ಕಳಕೊಂಡೆನು. ನಾನು ಬಿಟ್ಟ ಪಾಪಗಳಲ್ಲಿ ತಿರಿಗಿ ಶೇರಿದೆನು. ಸೈತಾನನಿಗೆ ತಿರಿಗಿ ಆಳಾದೆನು. ಯೇಸು ಕ್ರಿಸ್ತನ ರಕ್ತವನ್ನು ತುಳಿದು ದೂಷಿಸಿದೆನು. ನ್ಯಾಯದ ಪ್ರಕಾರ ನನಗೆ ತೀರ್ಪು ಉಂಟಾದರೆ, ನನಗೆ ಇಹದಲ್ಲಿಯೂ ಪರದಲ್ಲಿಯೂ ಗತಿ ಇಲ್ಲ; ಆದರೂ ನಾನು ಧೈರ್ಯಗೆಡುವದಿಲ್ಲ. ಸುವಾರ್ತೆಯ ವಾಕ್ಯವನ್ನು ಇನ್ನೂ ಕಿವಿಯಿಂದ ಕೇಳಿ, ನಂಬಿ, ನಿರಾಶೆಯಾಗುವದಿಲ್ಲ. ನನ್ನನ್ನು ನಿರ್ಮಿಸಿ ನನಗೆ ಜೀವ ಕೊಟ್ಟ ದೇವರೇ, ನೀನು ನನಗೆ ತಂದೆಯಾಗಿರುತ್ತೀಯಲ್ಲಾ? ನಾನು ಕೆಟ್ಟವನಾಗಿದ್ದರೂ, ಮಗನಾಗಿದ್ಧೇನಲ್ಲ? ನಾನು ಚಂಚಲನಾಗಿದ್ದರೂ, ನಿನ್ನ ಕರುಣೆಯು ನಿರಂತರವಾಗಿರುವದು. ನಿನ್ನ ವಾ

ಕ್ಯವನ್ನು ವಿಶ್ವಾಸಿಸಿ, ನಿನಗೆ ತಂದೆ ಎಂದು ಹೇಳುತ್ತೇನೆ. ಲೋಕದ ರಕ್ಷಕನಾದ ಯೇಸು ಕ್ರಿಸ್ತನೇ! ಲೋಕಕ್ಕೋಸ್ಕರ ಸತ್ತು, ಸಮಸ್ತ ಲೋಕದ ಪಾಪಪ್ರಾಯಶ್ಚಿತ್ತಕ್ಕಾಗಿ ನಿನ್ನ ರಕ್ತವನ್ನು ಚೆಲ್ಲಿ, ಒಬ್ಬೊಬ್ಬ ಮನುಷ್ಯನಿಗೋಸ್ಕರ ಮರಣದ ರುಚಿಯನ್ನು ನೋಡಿ, ಸತ್ತವರೊಳಗಿಂದ ಎದ್ದು, ಪಾಪವನ್ನೂ ಮರಣವನ್ನೂ ಸೈತಾನನನ್ನೂ ಜೈಸಿ, ತಿರುಗಿ ಬಿದ್ದವರಿಗೋಸ್ಕರವೂ ದಾನಗಳನ್ನು ಹೊಂದಿ, ಪರಲೋಕದಲ್ಲಿಯೂ ಭೂಲೋಕದಲ್ಲಿಯೂ ಸರ್ವಾಧಿಕಾರವನ್ನು ಸ್ವತಂತ್ರಿಸಿ ಕೊಂಡ ನನ್ನ ಕರ್ತನೇ, ನಾನು ಸಹ ನಿನ್ನವನಾಗಿದ್ದೇನೆ. ನನಗೋಸ್ಕರ ಸಹ ನೀನು ನಿನ್ನ ಜೀವವನ್ನು ಕೊಟ್ಟೆ. ನನಗೂ ಸರ್ವತ್ರಾಣಿಯಾದ ರಕ್ಷಕನಾಗಿರುತ್ತೀ. ನೀನು ಪಾಪಿಗಳನ್ನು ಪ್ರೀತಿ ಮಾಡುತ್ತೀ. ಪಾಪಿಯಾದ ನನ್ನ ಮೇಲೆಯೂ ನಿನ್ನ ಪ್ರೀತಿ ಇರುತ್ತದೆಂಬುವದು ನಿಶ್ಚಯ. ನಿನ್ನ ಬಳಿಗೆ ಬರುವವರಲ್ಲಿ ನೀನು ಒಬ್ಬನನ್ನಾದರೂ ತಳ್ಳುವದಿಲ್ಲ. ನಾನು ಬಂದದರಿಂದ ನನ್ನನ್ನು ಅಂಗೀಕರಿಸುತ್ತೀ ಎಂಬುವದು ನಿಶ್ಚಯ. ವಿಶ್ವಾಸಿಸುವವರನ್ನು ರಕ್ಷಿಸುತ್ತೇನೆಂಬ ನಿನ್ನ ವಾಕ್ಯವನ್ನು ನೀನೆಂದಿಗೂ ತಪ್ಪಲೀಸುವದಿಲ್ಲ. ಇಗೋ, ನಾನು ವಿಶ್ವಾಸದಿಂದ ನಿನಗೆ ಮೊರೆ ಇಡುತ್ತೇನೆ; ನಿನ್ನ ಕೃಪೆಗೂ ಪ್ರೀತಿಗೂ ಮಿತಿ ಇಲ್ಲ. ನನಗೆ ಈಗಲಾದರೂ ಕಿವಿಗೊಡು. ನ

ನ್ನನ್ನು ರಕ್ಷಿಸುವದಕ್ಕೆ ನಿನಗೆ ಶಕ್ತಿಯುಂಟು. ಪಾಪದ ಶೆರೆಯಿಂದಲೂ ಸೈತಾನನ ದಾಸತ್ವದಿಂದಲೂ ನನ್ನನ್ನು ಬಿಡಿಸು. ನನ್ನ ಹೃದಯವೂ ನಿನ್ನದು, ನನ್ನ ಜೀವವೂ ನಿನ್ನದು. ನೀನು ನಿನ್ನ ರಕ್ತವೆಂಬ ಕ್ರಯವನ್ನು ನನಗೋಸ್ಕರ ಕೊಟ್ಟದರಿಂದ, ನಾನು ನಿನ್ನವನಾಗಿದ್ಧೇನೆ. ನಿನ್ನ ಬೆಳಕನ್ನು ಕಳುಹಿಸಿ, ನನ್ನ ಅಂಧಕಾರವನ್ನು ಪರಿಹರಿಸು. ನಿನ್ನ ಆತ್ಮವನ್ನು ನನ್ನ ಹೃದಯದೊಳಗೆ ಕಳುಹಿಸಿ, ಸೈತಾನನನ್ನು ಹೊರಡಿಸು. ನಿನ್ನ ಕೃಪೆಯನ್ನು ನನಗೆ ತಿರಿಗಿ ಕೊಡು, ಪಾಪವನ್ನು ನಿರ್ಮೂಲ ಮಾಡು. ಸೈತಾನನನ್ನು ಜೈಸಿ, ನನ್ನನ್ನು ಬಿಡುಗಡೆ ಮಾಡು. ಆಮೆನ್.

---

# ೮. ಚಿತ್ರ.

ಈ ಚಿತ್ರದಲ್ಲಿ ಭಕ್ತಿಹೀನನ ಮರಣವೂ
ಪಾಪದ ಶಿಕ್ಷೆಯೂ ಕಾಣುತ್ತವೆ.

ಈ ಚಿತ್ರದಲ್ಲಿ ಬರದ ಪ್ರಕಾರ ಮಾನಸಾಂತರವಿಲ್ಲದ ಪಾಪಿಯು ದೇವರು ನೇಮಿಸಿದ ಕಾಲದಲ್ಲಿ ಸಾಯ ಬೇಕಾಗಿ,

ಕಡೇ ಘಳಿಗೆಯಲ್ಲಿ ಶರೀರದಲ್ಲಿ ನೊಂದು, ಮನಸ್ಸಿನಲ್ಲಿ ವ್ಯಥೆ ಪಟ್ಟು, ಮರಣಕ್ಕೆ ಹೆದರಿ, ಆ ಬಳಿಕ ಬರುವ ನ್ಯಾಯತೀರ್ವಿಕೆಗೆ ಭೀತನಾಗಿ, ಸಾಯಲಾರೆನೆಂದು ಒದ್ದಾಡುತ್ತಾನೆ. ಸ್ನೇಹಿತರೂ ನೆಂಟರೂ ಬಂಧುಗಳೂ ಸಾಯುವವನನ್ನು ಬಿಟ್ಟು ಹೋಗುವರು. ಬಿಡದಿದ್ದರೂ ಸಾಯುವದನ್ನು ತಪ್ಪಿಸಲಾರರು. ದೇವರನ್ನೂ ಲೋಕದ ರಕ್ಷಕನನ್ನೂ ನಂಬದೆ ಇರುವವನ ಹೃದಯವನ್ನು ಯಾರೂ ಸಮಾಧಾನ ಮಾಡಕೂಡದು. ಯಾಕಂದರೆ ಅವನಿಗೆ ಮನೋಹರವಾಗಿದ್ದ ಹೊನ್ನು ಹೆಣ್ಣು ಮಣ್ಣು ಮುಂತಾದ ಭೋಗಗಳನ್ನೆಲ್ಲಾ ಸುಲಕೊಳ್ಳುವ ಮೃತ್ಯು ಸಮಿಾಪಕ್ಕೆ ಬಂದದೆ.

ಚಿತ್ರದಲ್ಲಿ ಬರದ ಮೃತ್ಯುವಿನ ರೂಪವು ಬಲಗೈಯಿಂದ ಸಾಯುವವನ ತಲೆಯನ್ನು ಮುಟ್ಟಿ, ಅವನು ಇಹದಲ್ಲಿ ಮಾಡಿದ ಪರಿಹಾರವಿಲ್ಲದ ಪಾಪಗಳನ್ನೆಲ್ಲಾ ಜ್ಞಾಪಕ ಮಾಡುತ್ತದೆ. ಎಡಗೈಯಲ್ಲಿ ಕುಡುಗೋಲು ಹಿಡುಕೊಂಡು, ಮಾಂಸವೆಲ್ಲಾ ಹುಲ್ಲಿನ ಹಾಗಿದೆಂದು, ದೇವರಿಂದ ಅಪ್ಪಣೆ ಆಗುವ ಕ್ಷಣದಲ್ಲಿ ಅವನ ಜೀವವನ್ನು ಕೊಯ್ಯುವದಕ್ಕೆ ಸಿದ್ಧವಾಗಿದೆ. ಅಷ್ಟರೊಳಗೆ ತಾನು ಮಾಡಿದ ಅಪರಾಧಗಳನ್ನು ತಿಳುಕೊಂಡು, ತಾನು ತಿರಸ್ಕರಿಸಿದ ದೇವರ ಕೃಪೆಯನ್ನು ನೆನಸಿ, ಬಹು ಭಯಸ್ಥನಾಗಿ, ದೃಶ್ಯವಾದದ್ದನ್ನು ಭಯಭ್ರಾಂತಿಯಿಂ

ದ ಕಾಣದೆ, ಅದೃಶ್ಯರಾದ ಯಮದೂತರನ್ನೂ ತನಗೆ ಒದಗುವ ನರಕಾಗ್ನಿಯನ್ನೂ ಕಂಡು—ಸಹಾಯ ಮಾಡಿರಿ, ಸಹಾಯ ಮಾಡಿರಿ ಎಂದು ಒರಳಿ, ಮರಣದ ಬೆವರಿಡಿದು, ಮೂರ್ಛೆ ಹೋಗುವನು. ಪುನಹ ಸ್ವಲ್ಪ ಚೇತನಗೊಂಡು, ಕಳಿಯುವ ಜೀವವನ್ನು ಸ್ಮರಿಸಿ, ಯೌವನದ ಹೊಟ್ಟೆಬಾಕತನ ಜಾರತ್ವ ದುರುಳತನಗಳನ್ನೂ, ಮಧ್ಯಪ್ರಾಯದ ಅನ್ಯಾಯ ವಂಚನೆ ಸುಳ್ಳುಸಾಕ್ಷಿ ಮೊದಲಾದ ಅಕ್ರಮಗಳನ್ನೂ, ವೃದ್ಧಾಪ್ಯದಲ್ಲಿ ಲೋಭದಿಂದ ಸಂಪಾದಿಸಿ ಒಳಗೆ ಹೂಳಿಟ್ಟ ಚಿನ್ನ ಬೆಳ್ಳಿಗಳನ್ನೂ ಮನವರಿಕೆ ಮಾಡಿ ಕೊಂಡು, ಇವುಗಳನ್ನು ಕೊಂಡು ಹೋಗಲಾರೆನು, ಬಿಟ್ಟು ಹೋಗಲಾರೆನು ಎಂದು, ಬಿಕ್ಕಿ ಬಿಕ್ಕಿ ಅಳುತ್ತಾ, ಸಾಯಲಾರೆನೆಂದು, ಅರುಚುವನು.

ಪುನಹ ತಾನು ಮುಂಚೆ ಕೇಳಿ, ಸ್ವಲ್ಪ ಕಾಲ ನಂಬಿ ಇದ್ದ ಸುವಾರ್ತೆಯ ವಾಕ್ಯಗಳು ಅವನಿಗೆ ಕೇಳಿಸಲಾಗಿ, ಇಂಥಾ ರಮ್ಯವಾದ ಜೀವದ ವಾಕ್ಯವನ್ನು ಹುಚ್ಚಾದ ಅವಿಶ್ವಾಸದಿಂದ ತಳ್ಳಿದೆನು, ಆದದರಿಂದ ಈಗ ನಿರ್ಗತಿಯಾಗಿ ಬಿದ್ದು ನರಕದಲ್ಲಿ ಇಳಿಯುವವನಾಗಿದ್ದೇನೆಂದು ನರಳಿ, ಲೋಕಕ್ಕೋಸ್ಕರ ಕ್ರೂಜಿತನಾದ ಯೇಸು ಕ್ರಿಸ್ತನ ಕೃಪೆಯನ್ನು ತಿರಸ್ಕರಿಸಿದ ಶಾಪವೂ, ಎಲ್ಲಾ ಪಾಪಿಗಳ ಮೇಲಿರುವ ದೇವರ ಕರುಣೆಯನ್ನು ಅಲಕ್ಷ್ಯ ಮಾಡಿದ ಶಾಪವೂ, ಕೃಪೆಯ ಕಾಲದ

ಲ್ಲಿ ನನ್ನನ್ನು ಕರದು ನನಗೆ ಜ್ಞಾನಬೋಧನೆಯನ್ನೂ ಪಾಪಪರಿಹಾರದ ಸಮಾಧಾನವನ್ನೂ ಕೊಟ್ಟ ಪರಿಶುದ್ಧಾತ್ಮವನ್ನು ದೂಷಿಸಿದ ಶಾಪವೂ ನನಗೆ ಒದಗಿ ಅದೆ ಎಂದು, ನಿರಾಶೆಯಾಗಿ, ನಡುಗಿ, ಸ್ಥಿರ ತಪ್ಪಿ—ಪಾಪಿಗಳೆಲ್ಲರೇ, ಬನ್ನಿ; ಎಲ್ಲಾ ಅಪರಾಧಿಗಳಿಗೆ ನಾನು ಕ್ಷಮೆ ಕೊಡುತ್ತೇನೆ, ಎಲ್ಲಾ ಪಾಪಗ್ರಸ್ಥರಿಗೆ ಸಮಾಧಾನ ಕೊಡುತ್ತೇನೆ, ಸತ್ತವರೆಲ್ಲರಿಗೆ ಜೀವವನ್ನು ಕೊಡುತ್ತೇನೆ ಎಂದು, ಅತಿ ಮನೋಹರವಾದ ಶಬ್ದದಿಂದ ಕರೆಯುವ ಯೇಸು ಕ್ರಿಸ್ತನ ರೂಪವನ್ನು ಕನಸು ಕಂಡ ಹಾಗೆ ನೋಡಿ, ಪ್ರೀತಿ ಭರಿತವಾದ ಆತನ ಮುಖದ ಮಹಿಮೆಯನ್ನು ದೃಷ್ಟಿಸಿ, ಕಳವಳಗೊಂಡು—ನಿನ್ನ ದೃಷ್ಟಿ ತಾಳಲಾರೆನು, ನನಗೆ ನ್ಯಾಯತೀರಿಸಿ ನನ್ನನ್ನು ನಾಶ ಮಾಡ ಬಂದಿಯಾ? ಸಹಾಯ ಮಾಡಿರಿ, ಸಹಾಯ ಮಾಡಿರಿ ಎಂದು ಕೂಗಿ, ಸಾಯುವನು.

ಪ್ರಾಣಭೇದವಾದ ಮೇಲೆ, ದುಷ್ಟನ ಆತ್ಮವು ಶರೀರವನ್ನು ಬಿಟ್ಟು, ಪಾತಾಳಕ್ಕೆ ಇಳಿದು, ತಾನು ಬಿಟ್ಟು ಬಂದ ಲೋಕದ ಆಶೆಯಿಂದ ನಿತ್ಯ ನೀರಡಿಕೆಯಾಗಿ, ಹಿಂದಿನ ಜೀವದ ಅಪರಾಧಗಳಿಗೆ ತೀರ್ಪು ಮಾಡುವ ಮನಸ್ಸಾಕ್ಷಿಯ ಘೋರ ದಂಡನೆಗೊಳಗಾಗಿ, ತಾನು ಮಾಡಿದ ಪಾಪಗಳಿಗೆ ನೇಮಕವಾದ ಶಿಕ್ಷೆ ಬರುವದನ್ನು ನೋಡುತ್ತಾ, ತಾಳಲಾರದ ವ್ಯ

ಥೆ ಪಡುತ್ತಾನೆ. ಇದೇ ದುಷ್ಟನ ದುರ್ಗತಿಯ ಆರಂಭವು. ಹಿಂದು ಜನರು ಮೂವತ್ತೆರಡು ನರಕಗಳೆಂದು ಹೇಳುತ್ತಾರೆ; ಸತ್ತವರು ತಮ್ಮ ಕೃತ್ಯಗಳ ಪ್ರಕಾರ ತಕ್ಕ ಸ್ಥಳಗಳಲ್ಲಿ ಶೇರುತ್ತಾರೆ ಎಂದು ನೆನಸುತ್ತಾರೆ. ಅದೃಶ್ಯಲೋಕಗಳ ಸಂಗತಿಯನ್ನು ನೋಡಿದವನ ಹೊರ್ತು ಬೇರೆ ಯಾರೂ ನಿಶ್ಚಯ ಹೇಳ ಕೂಡದು. ದೇವರ ವಾಕ್ಯದ ಪ್ರಕಾರ ನರಕಲೋಕವು ದುಷ್ಟರಿಗೋಸ್ಕರ ಈಗ ಸಿದ್ಧವಾಗುತ್ತಾ ಇದೆ. ಲೋಕದ ರಕ್ಷಕನಾದ ಯೇಸು ಕ್ರಿಸ್ತನು ಲೋಕಕ್ಕೆ ನ್ಯಾಯತೀರಿಸುವದಕ್ಕಾಗಿ ಬಂದು, ಎಲ್ಲಾ ಮನುಷ್ಯರಿಗೆ ತೀರ್ಪು ಕೊಡುವಾಗಲೇ, ಶಾಪ ಹೊಂದುವವರು ಸೈತಾನನಿಗೂ ಅವನ ದೂತರಿಗೂ ಆಯತವಾದ ನರಕಾಗ್ನಿಯಲ್ಲಿ ಬಿದ್ದು ಹೋಗುವರು. ಆ ವರೆಗೆ ಯೇಸು ಕ್ರಿಸ್ತನ ಮುಖಾಂತ್ರ ಕೃಪೆಯನ್ನು ಹೊಂದದೆ ಇರುವ ಪಾಪಿಗಳು ಎಲ್ಲಿ ಇರುವರೆಂದೂ, ಹ್ಯಾಗೆ ಇರುವರೆಂದೂ, ದೇವರ ವಾಕ್ಯದಲ್ಲಿ ಬರದಿರುವದಿಲ್ಲ; ನ್ಯಾಯತೀರ್ವಿಕೆಯ ಶಿಕ್ಷೆಗಳನ್ನು ನಿರೀಕ್ಷಿಸುತ್ತಾ ಭಯ ಪಡುವವರಾಗಿದ್ದಾರೆಂಬುವದೇ (ಇಬ್ರಿ. ೧೦, ೨೭.) ಬರದದೆ; ನರಕದಲ್ಲಿ ಬೀಳುವವರು ನಿರಂತರ ಶಿಕ್ಷೆಗೆ ಒಳಗಾಗುತ್ತಾರೆಂದು ಬರದದೆ; ಅವರು ತಾಳ ಬೇಕಾದ ವ್ಯಥೆ ಎಂಥಾದ್ದೆಂದು ದೇಹಿಗಳಾದ ಮನುಷ್ಯರಿಗೆ ಹೇಳಿದರೂ, ಗ್ರಹಿ

ಸಲಾರರು; ಬರದದ್ದು ಸಾಕಾಗಿದೆ. ಅವರ ಬೆಂಕಿ ಆರುವದಿಲ್ಲ; ಅವರ ಹುಳ ಸಾಯುವದಿಲ್ಲ; ಅವರು ಎರಡನೇ ಮರಣಕ್ಕೆ ಒಳಗಾಗುತ್ತಾರೆ. ಜೀವವುಳ್ಳ ದೇವರ ಕೈಗಳಲ್ಲಿ ಬೀಳುವದು ಭಯಂಕರವಾದದ್ದು. ನಮ್ಮ ದೇವರು ದಹಿಸುವ ಅಗ್ನಿಯಾಗಿದ್ಧಾನೆಂದು, ಬರದದೆ. ಘೋರತರವಾದ ಈ ಸಂಕಟದಲ್ಲಿ ಬಿದ್ದ ಪಾಪಿ, ಆಗುವದಾದರೆ, ಪ್ರಾರ್ಥಿಸಿ ಹೇಳ ತಕ್ಕದ್ದೇನಂದರೆ:

---

## ಪ್ರಾರ್ಥನೆಯು.

ದೇವರೇ, ನೀನು ನೀತಿಯುಳ್ಳವನಾಗಿದ್ಧೀ. ನಿನ್ನ ತೀರ್ಪುಗಳೆಲ್ಲಾ ನ್ಯಾಯವಾಗಿವೆ. ನೀನು ಮುಖದಾಕ್ಷಿಣ್ಯ ನೋಡುವದಿಲ್ಲ. ಒಬ್ಬೊಬ್ಬನಿಗೆ ಅವನವನ ಕ್ರಿಯೆಗಳ ಪ್ರಕಾರ ನ್ಯಾಯವನ್ನು ತೀರಿಸುವಿ. ವಿಶ್ವಾಸವಿಡದವನು ಜೀವವನ್ನು ನೋಡುವದಿಲ್ಲ; ನಿನ್ನ ಕೋಪವು ಅವನ ಮೇಲೆ ನೆಲೆಯಾಗಿರುವದು. ನೀನು ಪ್ರೀತಿಯಾಗಿದ್ಧೀ. ಅಮಿತ ಪ್ರೀತಿಯಿಂದ ನಿನ್ನ ಮಗನನ್ನು ಲೋಕದ ರಕ್ಷಣ್ಯಕ್ಕಾಗಿ ಕ್ರೂಜೆಯ ಮರಣಕ್ಕೆ ಒಪ್ಪಿಸಿ ಕೊಟ್ಟು, ಲೋಕದ ಪಾಪವನ್ನೆಲ್ಲಾ ಪರಿಹರಿಸಿ, ಪಾಪಿಗಳ ಮೇಲೆ ಆಶ್ಚರ್ಯವಾದ ಪ್ರೀತಿ ಇಟ್ಟು,

ನಿತ್ಯಜೀವವನ್ನೂ ನಿನ್ನ ನಿತ್ಯರಾಜ್ಯದ ಮಹಿಮೆಯನ್ನೂ ದ್ರೋಹಿಗಳಿಗೆ, ಪ್ರಿಯ ಮಕ್ಕಳೆಂದು, ಕೊಡುತ್ತೀ. ನಿನ್ನ ಪ್ರೀತಿಯನ್ನು ಯೋಗ್ಯವಾಗಿ ಸ್ತುತಿಸುವದೂ ಪೂರ್ಣವಾಗಿ ಗ್ರಹಿಸುವದೂ ಅಸಾಧ್ಯವು. ಆದರೆ ನಿನ್ನ ವಾಕ್ಯದ ಸಾಕ್ಷಿಯನ್ನು ನಂಬದೆ ಇರುವವರಿಗೆ ಏನೂ ಗತಿ ಇಲ್ಲ; ಯಾಕಂದರೆ ನಿನ್ನ ಪ್ರೀತಿಯನ್ನು ತಳ್ಳಿದವರಿಗೆ ರಕ್ಷಣ್ಯ ಮಾಡುವ ಪ್ರೀತಿಯು ಎಲ್ಲಿ? ನಿನ್ನ ಕೃಪೆಯನ್ನು ಉದಾಸೀನ ಮಾಡಿದವರ ಪಾಪಗಳನ್ನು ಕ್ಷಮಿಸುವ ಕೃಪೆಯು ಎಲ್ಲಿ? ನಿನ್ನ ಕರುಣೆಯನ್ನು ವಲ್ಲೆನೆಂಬವರನ್ನು ಕರುಣಿಸುವ ಕರುಣೆಯು ಎಲ್ಲಿ?

ನನ್ನ ರಕ್ಷಕನಾದ ಕರ್ತನೇ, ನೀನು ಪಾಪದಿಂದಲೂ ಮರಣದಿಂದಲೂ ನರಕದಿಂದಲೂ ನನ್ನನ್ನು ಬಿಡುಗಡೆ ಮಾಡಿ ರಕ್ಷಿಸಿದ್ಧೀ ಎಂದು ವಿಶ್ವಾಸಿಸದೆ, ಕೆಟ್ಟು ಹೋಗಿದ್ಧೇನೆ. ನನಗೆ ಗತಿ ಇಲ್ಲ, ಸರಿ; ಆದಾಗ್ಯೂ ನಿನ್ನ ಕೃಪೆಗೆ ಮಿತಿ ಇಲ್ಲ. ನಿನಗೆ ಅಸಾಧ್ಯವಾದದ್ದು ಒಂದೂ ಇಲ್ಲ. ನಾನು ಪಾಪವನ್ನು ಅಸಹ್ಯಿಸಿ, ಹಗೆ ಮಾಡಿ, ಪ್ರೀತಿಯಿಂದ ನಿನ್ನ ವಶವಾಗುವ ಹಾಗೆ, ನನ್ನ ಹೃದಯದಲ್ಲಿ ವಿಶ್ವಾಸವನ್ನು ಹುಟ್ಟಿಸು. ನಾನು ಮರಣಕ್ಕೆ ತಪ್ಪಿಸಿ ಕೊಂಡು, ನಿತ್ಯಜೀವವನ್ನು ಹೊಂದುವ ಹಾಗೆ, ನನ್ನ ಹೃದಯವನ್ನು ಎಚ್ಚರಿಸು. ನಾನು ಸತ್ಯದಿಂದ ಮಾನಸಾಂತರನಾಗುವ ಹಾಗೆ, ನನ್ನ ಹೃದಯವ

ನ್ನು ಮರ್ದಿಸು. ನಾನು ಹೊಸ ಮನುಷ್ಯನಾಗಿ, ನಿನ್ನವನಾಗಿ ಜೀವಿಸಿ, ನಿನ್ನವನಾಗಿ ಸತ್ತು, ನಿನ್ನ ರಾಜ್ಯದಲ್ಲಿ ಶೇರುವ ಹಾಗೆ, ನಿನ್ನ ಆತ್ಮವನ್ನು ನನಗೆ ಕೊಡು. ಆಮೆನ್.

# ೯. ಚಿತ್ರ.

ಪಾಪಕ್ಕೆ ವಿರೋಧವಾದ ಯುದ್ಧದಲ್ಲಿ ಸ್ಥಿರನಾಗಿದ್ದು, ಅಂತ್ಯದ ವರೆಗೂ ಭಕ್ತಿಯ ಸಾಧನೆಯನ್ನು ಕೈಕೊಳ್ಳುವ ಭಕ್ತನ ಸ್ಥಿತಿಯು ಈ ಚಿತ್ರದಲ್ಲಿ ತೋರುತ್ತದೆ.

ಲೋಕದ ಮಾಯೆಯನ್ನೂ ಪಾಪದ ಮೋಸವನ್ನೂ ಸೈತಾನನ ಕಪಟವನ್ನೂ ಸುವಾರ್ತೆಯಿಂದ ತಿಳುಕೊಂಡು, ಮರಣದ ಮಾರ್ಗವನ್ನು ಬಿಟ್ಟು, ಲೋಕದ ರಕ್ಷಣೆಗೋಸ್ಕರ ಕ್ರೂಜೆ ತಾಳಿದ ಯೇಸು ಕ್ರಿಸ್ತನಿಗೆ ವಿಶ್ವಾಸದಿಂದ ತನ್ನನ್ನು ಒಪ್ಪಿಸಿ ಕೊಟ್ಟು, ಜೀವಮಾರ್ಗದಲ್ಲಿ ಶೇರಿ, ಜೀವದ ವಾಕ್ಯವನ್ನು ನಂಬಿಕೆಯುಳ್ಳವನಾಗಿ ಅನುಸರಿಸುವ ಮನುಷ್ಯನು, ಈ ಲೋಕವನ್ನು ಬಿಡುವ ಪರ್ಯಂತರ, ನಿತ್ಯ ಯುದ್ಧದಲ್ಲಿ ಇದ್ದಾನೆ. ಈ ಯುದ್ಧವು ಮೂರು ವಿಧವಾದದ್ದು.

ಆತ್ಮಕ್ಕೂ ಮಾಂಸಕ್ಕೂ ನಡಿಯುವ ಯುದ್ಧ ಒಂದು. ದೇವರ ಆತ್ಮದಿಂದ ಪುನರ್ಜನ್ಮವಾದ ಭಕ್ತನ ಆತ್ಮವು ದೇವರ ವಾಕ್ಯದಿಂದ ಜ್ಞಾನೋಪದೇಶ ಹೊಂದಿ, ದೇವರ ಆತ್ಮಕ್ಕೆ ವಶವಾಗಿ, ಯೇಸು ಕ್ರಿಸ್ತನನ್ನು ಪ್ರೀತಿ ಮಾಡಿ, ದೇವರ ಆಜ್ಞೆಗೆ ಮೆಚ್ಚಿ, ಕರ್ತನ ಕೃಪೆಯು ಪರಮ ಸುಖವೆಂದೆಣಿಸಿ, ಪಾಪವನ್ನೆಲ್ಲಾ ಅಸಹ್ಯಿಸುತ್ತದೆ. ಮಾಂಸಮಯವಾದ ಪೂರ್ವಭಾವವು, ಮನುಷ್ಯನು ಈ ಲೋಕವನ್ನು ಬಿಡುವ ಪರ್ಯಂತರ, ಹೋಗದೆ ಇರುತ್ತದೆ. ಪೂರ್ವಭಾವದ ಮನಸ್ಸಿಗೆ ಜ್ಞಾನ ಹುಟ್ಟುವದಿಲ್ಲ; ಅದು ಸುವಾರ್ತೆಯನ್ನು ನಂಬದೆ, ಉದಾಸೀನ ಮಾಡಿ, ಯೇಸು ಕ್ರಿಸ್ತನ ಪ್ರೀತಿಯನ್ನು ತಿರಸ್ಕರಿಸಿ, ದೇವರ ನೀತಿಯನ್ನು ಧಿಕ್ಕರಿಸಿ, ಪ್ರಪಂಚದ ಭೋಗ ಪರಮ ಸುಖವೆಂದೆಣಿಸಿ, ತಾಪತ್ರಯಗಳೆಂಬ ಶಳವಿನಲ್ಲಿ ಶಿಕ್ಕಿ ಸುಳಿದಾಡುತ್ತದೆ. ಆತ್ಮಕ್ಕೆ ಹಿತವಾದದ್ದು ಮಾಂಸಕ್ಕೆ ಅಹಿತವಾಗಿದೆ; ಮಾಂಸಕ್ಕೆ ಹಿತವಾದದ್ದು ಆತ್ಮಕ್ಕೆ ಅಹಿತವಾಗಿದೆ. ಈ ವೈರಿಗಳಿಗೆ ಎಂದಿಗೂ ಒಡಂಬಡಿಕೆಯಾಗುವದಿಲ್ಲ. ಪರಲೋಕದ ದ್ರವ್ಯಗಳು ಆತ್ಮವನ್ನು ಎಳ ಕೊಳ್ಳುತ್ತವೆ; ಭೂಲೋಕದ ಐಶ್ವರ್ಯಾದಿಗಳು ಮಾಂಸಕ್ಕೆ ಸಂಭ್ರಮ ಕೊಡುತ್ತವೆ. ಆತ್ಮಕ್ಕೆ ಸಂತೋಷವಾದದ್ದು ಮಾಂಸಕ್ಕೆ ದುಃಖವು; ಮಾಂಸದ ಬಿಂಕವು ಆತ್ಮಕ್ಕೆ ನಾಚಿಕೆಯು. ಆತ್ಮವು ಅ

ತ್ಯಾಸಕ್ತಿಯಿಂದ ಹಾರೈಸುವದನ್ನು ಮಾಂಸವು ತಾಳಲಾರೆನೆಂದು ಹೇಳುತ್ತದೆ. ಹಗಲೂ ಇರುಳೂ ಕೂಡಿರುವ ಒಂದು ದಿವಸದಲ್ಲಿ ಹಗಲು ಬರುವಾಗ ಇರುಳು, ಇರುಳು ಬರುವಾಗ ಹಗಲು, ಹೋಗುವದು ಹ್ಯಾಗೋ, ಹಾಗೆಯೇ ಆತ್ಮವೂ ಮಾಂಸವೂ ಮನುಷ್ಯಭಾವದಲ್ಲಿದ್ದು, ಒಂದಕ್ಕೊಂದು ಹೊಂದದೆ ಕಾದ್ಯಾಡುತ್ತವೆ. ದುರ್ಗುಣಗಳು ಭಕ್ತನಲ್ಲಿ ಅಪಜಯವಾದರೂ, ಪೂರ್ಣ ನಾಶವಾಗುವದಿಲ್ಲ. ಇದು ಒಂದು ವಿಧದ ಯುದ್ಧವು.

ಮತ್ತು ಮೊದಲು ಮನುಷ್ಯನ ಮೇಲೆ ಧೊರೆತನ ಮಾಡಿದ ಈ ಲೋಕದ ಅರಸನಾದ ಸೈತಾನನು ಕಳಕೊಂಡ ಸ್ವಾಸ್ಥ್ಯವನ್ನು ಪುನಹ ಸಂಪಾದಿಸಿ ಕೊಳ್ಳ ಬೇಕೆಂದು, ಪ್ರಯತ್ನ ಮಾಡಿ, ತಿರಿಗಿ ಶಿಕ್ಕದೆಂದು ತಿಳುಕೊಂಡರೆ, ಬಹಳವಾಗಿ ಕೋಪಿಸಿ, ನಾನಾ ಶೋಧನೆಗಳೆಂಬ ಉರಿಬಾಣಗಳನ್ನು ಎಸೆದು, ತೊಂದರೆ ಮಾಡುತ್ತಾನೆ. ಸೈತಾನನ ಪ್ರೇರಣೆಯಿಂದ ವಿಶ್ವಾಸ ಪ್ರೀತಿ ಮೊದಲಾದ ಪುನರ್ಜಾತನ ಸುಗುಣಗಳಿಗೆ ವಿರೋಧವಾದ ಸಂಶಯ ಅವಿಶ್ವಾಸ ಅಧೈರ್ಯಾದಿ ಆಲೋಚನೆಗಳೂ ಮಾತುಗಳೂ ಭಕ್ತನ ಹೃದಯದಲ್ಲಿ ಹುಟ್ಟುತ್ತವೆ. ಈ ಶೋಧನೆಗಳಿಂದ ಒಂದೊಂದು ವೇಳೆ ಬಹಳ ಸಂಕಟವಾ

ಗುವದು; ಆದರೂ ನಂಬುವವನಿಗೆ ಜಯವಾಗುವದು. ಇದು ಎರಡನೇ ವಿಧದ ಯುದ್ಧವು.

ಮತ್ತು ಲೋಕವೆಲ್ಲವು ದೇವರ ತಿಳುವಿಕೆಗೆ ದೂರವಾಗಿ, ದೇವರ ಆತ್ಮಕ್ಕೆ ಅವಿಧೇಯವಾಗಿ, ಸೈತಾನನ ಮಾಟಗಳಿಗೆ ವಶವಾಗಿರುವದರಿಂದ, ಪರಲೋಕದವನಾದ ಭಕ್ತನಿಗೆ ಲೋಕದ ಮಾರ್ಗ ಮರ್ಯಾದೆ ಮಾತು ಕೆಲಸ ಆಟ ಭೋಗಗಳಿಂದೆಲ್ಲಾ ನಾನಾ ಉಪದ್ರಗಳು ಬರುತ್ತವೆ. ಹ್ಯಾಗಂದರೆ: ಲೋಕಕ್ಕೆ ಮೆಚ್ಚಿದರೆ, ಅಂತರಂಗದಲ್ಲಿ ಕೇಡು ಉಂಟಾಗುವದು; ಅದನ್ನು ಮೆಚ್ಚದೆ ಎದುರಿಸಿದರೆ, ಲೋಕಕ್ಕೆ ಮೆಚ್ಚುವವರ ವಿರೋಧವು ಉಂಟಾಗುವದು. ಇದು ಒಂದು ವಿಧದ ಯುದ್ಧವು.

ಈ ಮೂರು ವಿಧವಾದ ಯುದ್ಧದಲ್ಲಿ ಭಕ್ತನು ಜಯಹೊಂದ ಬೇಕಾದರೆ, ಅವನು ಆತ್ಮದ ಆಯುಧಗಳನ್ನು ಚನ್ನಾಗಿ ಪ್ರಯೋಗಿಸ ಬೇಕು. ಅವು ಯಾವವಂದರೆ: ವಿಶ್ವಾಸವೆಂಬ ಹಲಿಗೆ, ನೀತಿ ಎಂಬ ಕವಚ, ದೇವರ ವಾಕ್ಯವೆಂಬ ಖಡ್ಗ, ಸುವಾರ್ತೆಯನ್ನು ಸಾರ ಹೋಗುವದಕ್ಕೆ ಸಿದ್ಧವಾದ ಮನಸ್ಸೆಂಬ ವೊಚ್ಚೆ. ಇದಲ್ಲದೆ ಯೇಸು ಕ್ರಿಸ್ತನ ಕ್ರೂಜೆಯ ಧ್ಯಾನವು ಹೃದಯದಲ್ಲಿ ದೃಢವಾಗಿದ್ದು, ಲೋಕ ಮಾಂಸಗಳ ದ್ವೇಷವನ್ನು ಆತ್ಮದಲ್ಲಿ ಹೆಚ್ಚಿಸ ಬೇಕು. ಭಕ್ತನಲ್ಲಿ ಇ

ರುವ ನಿತ್ಯಜೀವಕ್ಕೆ, ಜೀವದ ರೊಟ್ಟಿ ತಿನ್ನುವದರಿಂದಲೂ ಜೀವದ ಪಾನ ಕುಡಿಯುವದರಿಂದಲೂ ಹಶಿವೆ ನೀರಡಿಕೆಗಳಿಗೆ ತೃಪ್ತಿಯುಂಟಾಗಿ, ಬಲಾಭಿವೃದ್ಧಿಯು ಆಗ ಬೇಕು.

ಮತ್ತು ನಿತ್ಯಜೀವದ ಆಶೆ ಎಂಬ ಶುಕ್ರನು ಮರಣವೆಂಬ ಜೀವೋದಯವಾಗುವ ತನಕ ಕಳೆ ಹೆಚ್ಚುತ್ತಾ ಇರ ಬೇಕು. ಇಂಥವನಿಗೆ ದೇವರ ಕೃಪೆಯು ಹೆಚ್ಚು ಹೆಚ್ಚಾದ ಆಧಾರ ಕೊಟ್ಟು, ಎಲ್ಲಾ ಇಕ್ಕಟ್ಟುಗಳಲ್ಲಿ ಸುಮಾರ್ಗ ತೋರಿಸಿ, ಎಲ್ಲಾ ಶ್ರಮೆಗಳನ್ನು ಪರಿಹರಿಸುವ ಪ್ರೀತಿಯ ಮಾತುಗಳನ್ನು ಕಿವಿಯಲ್ಲಿ ಹೇಳುವದು. ಕಡೆಯಲ್ಲಿ ಶರೀರದ ಕಣ್ಣಿಗೆ ಮೊಬ್ಬು ಗವಿಯುವ ವೇಳೆಯಲ್ಲಿ ಜಯಶಾಲಿಗಳಿಗೆ ಮಹಿಮೆಯ ರಾಜ್ಯದಲ್ಲಿ ಶಿಕ್ಕುವ ಮಹಿಮೆಯ ಕಿರೀಟದ ಪ್ರಕಾಶವು ಆತ್ಮದೃಷ್ಟಿಗೆ ಉದಯಿಸುತ್ತದೆ.

ಒಂಭತ್ತನೇ ಚಿತ್ರದಲ್ಲಿ ಈ ಅಭಿಪ್ರಾಯಗಳೆಲ್ಲ ಚಿತ್ರದ ರೀತಿಯಿಂದ ಬರದವೆ; ವಿವೇಕದಿಂದ ನೋಡಿದರೆ, ಮನವರಿಕೆಯಾಗುವದು.

## ಪ್ರಾರ್ಥನೆಯು.

ನನ್ನ ಪ್ರೀತಿಗೆ ಸಮ್ಮುಖನಾದ ಯೇಸು ಕ್ರಿಸ್ತನೇ, ನಿನ್ನ ಕೃಪೆಯ ಅನುಭವವು ನನಗೆ ಇದ್ದರೆ, ಇಹಪರಗಳ ಚಿಂತೆ

ಏನೂ ಇಲ್ಲ. ನಿನ್ನ ನಾಮಕ್ಕೆ ಹಿತವಾದ ಫಲವು ನನ್ನಲ್ಲಿ ಉಂಟಾಗುವ ಹಾಗೆ, ನಿನ್ನ ಆತ್ಮದ ಮುಖಾಂತ್ರ ನನ್ನಲ್ಲಿ ವಾಸ ಮಾಡು. ನಿನ್ನ ಸಹಾಯದ ಹೊರ್ತು ನಾನೇನೂ ಮಾಡಲಾರೆನು. ಸರ್ವತ್ರಾಣಿಯಾದ ರಕ್ಷಕನಾಗಿರುವ ನೀನು ಅನುಕೂಲನಾಗಿದ್ದರೆ, ಮಾಡಲಸಾಧ್ಯವಾದ ಕೆಲಸ ಒಂದೂ ಇಲ್ಲ, ತಾಳಲಸಾಧ್ಯವಾದ ಉಪದ್ರ ಒಂದೂ ಇಲ್ಲ, ಜೈಸಲಸಾಧ್ಯವಾದ ವೈರಿಯೊಬ್ಬನೂ ಇಲ್ಲ. ನಿನ್ನ ಪ್ರೀತಿ ಎಂಬ ಅಗ್ನಿಯು ನನ್ನಲ್ಲಿ ಉಜ್ಜ್ವಲಿಸಿ, ನನ್ನ ಹೃದಯವನ್ನು ಕುದಿಸಿ, ನಿನ್ನ ಚಲುವಿಕೆಯನ್ನು ನಾನು ಸತ್ಯದಿಂದ ನೋಡಿ, ನಿನ್ನ ಮಹಿಮೆಯನ್ನು ಯಥಾರ್ಥವಾಗಿ ಕಂಡು, ಪಾಪದ ಕೊಳಕನ್ನು ದೃಷ್ಟಿಸಿ ಅಸಹ್ಯಿಸಿ, ಪ್ರಪಂಚದ ಮಾಯೆಯನ್ನು ತಿಳಿದು ತಿರಸ್ಕರಿಸಿ, ಸತ್ಯವನ್ನು ಯಥಾರ್ಥವಾಗಿ ಗ್ರಹಿಸುವ ಹಾಗೆ, ಪೂರ್ವಭಾವದ ಮಾಟವನ್ನು ತೊಲಗಿಸಿ, ನನ್ನ ಜ್ಞಾನೇಂದ್ರಿಯಗಳನ್ನು ಶುದ್ಧ ಮಾಡಲಿ. ಪರಲೋಕದಲ್ಲಿಯೂ ಭೂಲೋಕದಲ್ಲಿಯೂ ನಿನ್ನ ಪ್ರೀತಿಗಿಂತ ಮನೋಹರವಾದದ್ದು ಏನೂ ಇಲ್ಲ. ನಿನ್ನ ವಾಕ್ಯದ ಜ್ಞಾನದಿಂದಲೂ ನಿನ್ನ ಆತ್ಮದ ತ್ರಾಣದಿಂದಲೂ ನನ್ನ ಹೃದಯವನ್ನು ದೃಢ ಮಾಡು. ನಿನ್ನ ಮರಣವು ನನಗೆ ಜೀವವಾಗಲಿ. ನಾನು ಜೀವದ ಪಾನವನ್ನು ಕುಡಿಯುವ ಹಾಗೆ, ನಿನ್ನ ಪಾತ್ರೆಯನ್ನು ಕೊಡು.

ನಾನು ತಿಂದು ತೃಪ್ತಿ ಹೊಂದುವ ಹಾಗೆ, ಜೀವದ ರೊಟ್ಟಿ ಯನ್ನು ನನಗೆ ದಯ ಮಾಡು. ನಿನ್ನ ಕ್ರೂಜೆಯು ಭಯಂ ಕರವಾದ ಧ್ವಜವಾಗಿ, ನನ್ನ ಶತ್ರುಗಳನ್ನು ಹೆದರಿಸಲಿ. ವಿ ಶ್ವಾಸವನ್ನು ನನ್ನಲ್ಲಿ ಎಂದೆಂದಿಗೂ ಹೆಚ್ಚಿಸು. ಆತ್ಮವೂ ಜೀ ವವೂ ಉಳ್ಳ ನಿನ್ನ ವಾಕ್ಯವು ದಣಿದ ಆತ್ಮವನ್ನು ಸಂಪ್ರಾಣಿ ಸುವ ಘಾಳಿಯೂ, ಮನಸ್ಸಿನ ಕತ್ತಲೆಯನ್ನು ಪರಿಹರಿಸುವ ಬೆಳಕೂ, ಆಲಸನಾದ ಆಯಾಸಿಯನ್ನು ಎಚ್ಚರಿಸುವ ಸ್ನೇ ಹಿತನೂ, ಮನಗುಂದಿದ ದುಃಖಿಯನ್ನು ಆದರಿಸುವ ಸಹಾ ಯಕನೂ ಆಗಿದ್ದು, ಅನುದಿನದ ಯುದ್ಧದಲ್ಲಿ ನನ್ನನ್ನು ಬಲ ಗೊಳ್ಳಿಸಿ, ಪ್ರತಿದಿನದ ಶೋಧನೆಗಳಲ್ಲಿ ನನಗೆ ತಾಳ್ಮೆಯನ್ನು ಕೊಟ್ಟು, ನಿನ್ನ ಇಚ್ಛೆಯನ್ನೆಲ್ಲಾ ನನ್ನಲ್ಲಿ ಪೂರೈಸಲಿ. ನನ್ನ ಧ್ಯಾ ನ ಮನ ಹೃದಯಗಳು ನಿತ್ಯ ನಿನ್ನ ಮೇಲಿರಲಿ. ದುರ್ಗುಣ ದುರಾಶೆಗಳ ಸಮಸ್ತ ಸೈನ್ಯಕ್ಕೆ ನಾನು ಸತ್ಯದ್ವೇಷದಿಂದ ಯು ದ್ಧ ಮಾಡಿ ಜಯವನ್ನು ಹೊಂದುವ ಹಾಗೆ, ನಿನ್ನ ಕೃಪೆಯ ತ್ರಾಣವನ್ನು, ಕ್ಷಣೇ ಕ್ಷಣೇ ಬೇಕಾದ ಹಾಗೆ, ನನಗೆ ಕೊ ಡು. ನಾನು ಪ್ರಾರ್ಥನೆಯಲ್ಲಿಯೂ ಜಾಗ್ರತೆಯಲ್ಲಿಯೂ ದೃ ಢನಾಗಿದ್ದು, ಶತ್ರುಗಳಿಗೆ ಭದ್ರನಾಗಿಯೂ ನಿನಗೆ ನಂಬಿಕೆಯು ಳ್ಳ ದಾಸನಾಗಿಯೂ ಅಂತ್ಯದ ವರೆಗೆ ಇರುವ ಹಾಗೆ, ಪರಿ ಶುದ್ಧಾತ್ಮವನ್ನು ನನಗೆ ದಯ ಮಾಡು. ಆಮೆನ್.

# ೧೦. ಚಿತ್ರ.

ಈ ಚಿತ್ರದಲ್ಲಿ ಭಕ್ತನಾದ ನೀತಿವಂತನ ಮರಣವು ತೋರುತ್ತದೆ.

ಅವಿಶ್ವಾಸಿಗಳಿಗೆ ಭಯಂಕರವಾದ ಮರಣದ ದಿವಸವು ಭಕ್ತನಿಗೆ ಸುದಿನವಾಗಿದೆ; ಯಾಕಂದರೆ ಪಾಪಪರಿಹಾರವನ್ನು ಹೊಂದಿದವನಾಗಿ, ನ್ಯಾಯತೀರ್ವಿಕೆಗೆ ಅಂಜದೆ, ತಾನು ನೋಡದೆ ನಂಬಿ ಪ್ರೀತಿ ಮಾಡಿದ ರಕ್ಷಕನನ್ನು, ಈ ದೇಹವನ್ನು ಬಿಟ್ಟ ಬಳಿಕ, ಕಾಣುವೆನೆಂದೂ, ತಾನು ನೋಡದೆ ನಂಬಿದ ಪರದ ಮಹಿಮೆಯನ್ನು, ಇಹ ತಪ್ಪಿದ ಬಳಿಕ, ಸ್ವತಂತ್ರಿಸಿ ಕೊಳ್ಳುವೆನೆಂದೂ ಆಲೋಚಿಸಿ, ಸಂಭ್ರಮವಾಗಿದ್ದಾನೆ. ನಿಶ್ಚಯವಾಗಿ ನಿಶ್ಚಯವಾಗಿ ನಿಮಗೆ ಹೇಳುತ್ತೇನೆ: ನನ್ನ ವಾಕ್ಯವನ್ನು ಕೇಳಿ, ನನ್ನನ್ನು ಕಳುಹಿಸಿದವನಲ್ಲಿ ವಿಶ್ವಾಸವಿಡುವವನಿಗೆ ನಿತ್ಯಜೀವ ಉಂಟು; ಅವನು ನ್ಯಾಯತೀರ್ವಿಕೆಯೊಳಗೆ ಬಾರದೆ, ಮರಣವನ್ನು ಬಿಟ್ಟು, ಜೀವಕ್ಕೆ ಹೋಗಿದ್ದಾನೆ ಎಂಬ ಕರ್ತನ ವಾಕ್ಯವನ್ನು ಧ್ಯಾನಿಸಿ, ಮರಣವು ನಿದ್ದೆ ಎಂದು ಭಾವಿಸಿ, ಶಾಂತನಾಗಿ ಮಲಗುತ್ತಾನೆ. ಪಾಪದ ರಾಜ್ಯವಾದ ಲೋಕವನ್ನೂ ಪಾಪದ ಗೂಡಾದ ಶರೀರವನ್ನೂ ಬಿಟ್ಟು, ಸತ್ಯಲೋಕಕ್ಕೆ ಏರಿ, ಅಜ್ಞಾನ ಪಾಪ ಭಯ

ಗಳಿಲ್ಲದವನಾಗಿ, ಕರ್ತನ ಸನ್ನಿಧಿಯಲ್ಲಿ ಪ್ರವೇಶಿಸುವ ಸಮಯವು ಬಂತೆಂದು, ಮೂರ್ಛೆ ಹೋದವನೊಬ್ಬನಿಗೆ ಜೀವ ಬಂದಷ್ಟು ಸಂತೋಷವನ್ನು ಅನುಭವಿಸಿ, ನಿತ್ಯಜೀವದಲ್ಲಿ ಶೇರುವದಕ್ಕೆ ಹಾರಗುಪ್ಪೆ ಮಾಡುತ್ತಾನೆ. ಮರಣದ ನೆರಳಿನಿಂದ ಕಣ್ಣು ಮೊಬ್ಬಾದ ಹಾಗೆ ಇದ್ದರೂ, ದೇವದೂತರು ತನ್ನ ಆತ್ಮವನ್ನು ಕರಕೊಂಡು ಹೋಗಲಿಕ್ಕೆ ಬಂದು, ನಿನ್ನ ಸಂಕಟಗಳೆಲ್ಲಾ ಮುಗಿದು ಹೋಗಿವೆ ಎಂದು, ಸಂತೈಸಿದ ಪ್ರಕಾರ, ಅವನ ಹೃದಯದಲ್ಲಿ ಆನಂದದ ಬೆಳಕು ಪ್ರಕಾಶಿಸುತ್ತದೆ. ಆ ವೇಳೆಯಲ್ಲಿ ಸೈತಾನನು, ಓಡಿ ಹೋದ ಹುಟ್ಟುವಕ್ಕಲನ್ನು ಹಿಡಕೊಂಡು ಬರುವದಕ್ಕೆ ಹಿಂದಟ್ಟುವ ಒಡೆಯನ ಹಾಗೆ, ಮುಂಚೆ ತನ್ನನ್ನು ಸೇವಿಸಿದ ಭಕ್ತನನ್ನು ಸ್ವಾಧೀನ ಮಾಡಲಿಕ್ಕೆ ಬಂದು, ಅಜ್ಞಾನಿಯಾಗಿದ್ದ ಕಾಲದಲ್ಲಿ ಮಾಡಿದ ಅಪರಾಧಗಳನ್ನೆಲ್ಲಾ ಅವನಿಗೆ ಜ್ಞಾಪಕ ಮಾಡಿ, ನೀನು ನನ್ನವನು ಮೋಸ ಮಾಡಿ ತಪ್ಪಲಾರಿ ಎಂದು ಹೆದರಿಸಿದರೆ, ಭಕ್ತನು ಯೇಸು ಕ್ರಿಸ್ತನನ್ನು ಧ್ಯಾನಿಸಿ, ಸುಳ್ಳು ವ್ಯವಹಾರ ನಡಿಸುವ ವಕೀಲನಾದ ವೈರಿಗೆ ಹೆದರದೆ—ನನ್ನ ಅಪರಾಧಗಳನ್ನೆಲ್ಲಾ ಕ್ಷಮಿಸಿ, ನನ್ನ ಸಾಲಗಳನ್ನೆಲ್ಲಾ ಸಲ್ಲಿಸಿದವನು ನಿನಗಿಂತ ಬಲಿಷ್ಠನಾಗಿದ್ದಾನೆ; ಆತನಲ್ಲಿ ವಿಶ್ವಾಸವಿಡುವ ಪಾಪಿಯ ಮೇಲೆ ಅಪರಾಧವಿಲ್ಲ; ಯೇಸು ಕ್ರಿಸ್ತನ ರಕ್ತದ ಮೂ

ಲವಾಗಿ ಪಾಪದಿಂದ ಶುದ್ಧನಾದೆನು; ನಿನ್ನ ವ್ಯಾಜ್ಯವೆಲ್ಲಾ ಕೆಟ್ಟು ಹೋಯಿತೆಂದು ತಿಳುಕೋ; ಯೇಸು ಕ್ರಿಸ್ತನೊಂದಿಗೆ ಕ್ರೂಜಿತನಾದ ಮನುಷ್ಯನನ್ನು ನೀನು ಗೆಲ್ಲಲಾರೆ ಎಂದು, ಧೈರ್ಯವಾಗಿ ಹೇಳುತ್ತಾನೆ. ಸೈತಾನನು ದೃಢ ವಿಶ್ವಾಸದ ಉತ್ತರ ಕೇಳುತ್ತಲೇ, ತಾನು ಸೋತೆನೆಂದು, ಓಡಿ ಹೋಗುತ್ತಾನೆ. ಮತ್ತು ಭಕ್ತನು ಶರೀರವಳಿಯುವಾಗ, ನಿತ್ಯಜೀವದ ಆಹಾರ ಪಾನಾದಿಗಳಿಂದ ತೃಪ್ತಾತ್ಮನಾಗಿ, ವಿಶ್ರಮಿಸಿ ಕೊಳ್ಳುತ್ತಾನೆ. ಕಡೆಯಲ್ಲಿ—ನಂಬಿಕೆಯುಳ್ಳ ಭಕ್ತನಾದ ಸೇವಕನೇ, ಬಾ; ನೀನು ಸ್ವಲ್ಪದರ ಮೇಲೆ ನಂಬಿಕೆಯುಳ್ಳವನಾಗಿದ್ದಿ, ಬಹಳದರ ಮೇಲೆ ನಿನ್ನನ್ನು ಇಟ್ಟು ಕೊಳ್ಳುತ್ತೇನೆ; ನಿನ್ನ ಯಜಮಾನನ ಸಂತೋಷದಲ್ಲಿ ಶೇರು ಎಂಬ ಕರ್ತನ ವಾಕ್ಯವನ್ನು ಕೇಳಿ, ದೇಹ ಬಿಟ್ಟು ಹೋಗುತ್ತಾನೆ. (ಮತ್ತಾ. ೨೫, ೨೧.)

ಆ ಮೇಲೆ ಏನು ಆಗುವದು, ಅದನ್ನು ಸಹ ತಿಳುಕೊಳ್ಳಬೇಕೆಂದು ಅಪೇಕ್ಷಿಸುವವನು ಹೃದಯದರ್ಪಣವೆಂಬ ಈ ಸಣ್ಣ ಪುಸ್ತಕ ಬಿಟ್ಟು, ಇಹಪರದರ್ಪಣವಾದ ದೇವರ ವಾಕ್ಯವನ್ನು ವಿಚಾರಿಸಿ, ಜ್ಞಾನೋಪದೇಶ ಹೊಂದ ತಕ್ಕದ್ದು.



## ಪ್ರಾರ್ಥನೆಯು.

ನನ್ನ ಕರ್ತನಾದ ಯೇಸು ಕ್ರಿಸ್ತನೇ, ವಿಶ್ವಾಸದಲ್ಲಿಯೂ ಪ್ರೀತಿಯಲ್ಲಿಯೂ ವಿಧೇಯತ್ವದಲ್ಲಿಯೂ ನನ್ನ ಹೃದಯವನ್ನು ದೃಢ ಮಾಡಿ, ಅಂತ್ಯದ ವರೆಗೂ ಕಾಪಾಡು; ಆಗಲು ಸಾಯುವ ದಿವಸದಲ್ಲಿ ನಿನ್ನ ಐಕ್ಯದಲ್ಲಿ ನೆಲೆಯಾಗಿದ್ದು, ನೀನು ಕೊಟ್ಟ ಪರಿಹಾರದಲ್ಲಿ ಸಂತೋಷಿಸಿ, ನಿನ್ನ ವಾಕ್ಯದಿಂದ ಆದರಣೆ ಹೊಂದಿ ನಿನ್ನ ರಕ್ತದಿಂದ ತೊಳಿಸಿ ಕೊಂಡು, ನಿನ್ನ ನೀತಿಯ ವಸ್ತ್ರವನ್ನು ತೊಟ್ಟು, ನಿನ್ನ ಆತ್ಮದಿಂದ ಪರಿಶುದ್ಧನಾಗಿ, ಸೈತಾನನ ವ್ಯಾಜ್ಯ ದೂಷಣಾದಿಗಳಿಗೆ ಭಯ ಪಡದೆ, ಈ ಲೋಕವನ್ನು ಬಿಟ್ಟು, ನಿನ್ನ ಬಳಿಯ ಶೇರ ಸಿದ್ಧನಾಗಿರುವೆನು. ಅತಿ ಪ್ರಿಯನಾದ ಯೇಸುವೇ, ನಿನ್ನ ಸಂಗಡ ಬಾಳಿ ನಿನ್ನ ಸಂಗಡ ಸಾಯ ಬೇಕೆಂದು ಇಚ್ಛೈಸಿ, ನೀನು ನೇಮಿಸಿದ ಮಾರ್ಗವನ್ನು ಬಿಡದೆ, ಅನುದಿನವು ಪಾಪಕ್ಕೂ ಲೋಕಕ್ಕೂ ಮಾಂಸಕ್ಕೂ ಸತ್ತವನಂತಿದ್ದು, ವಿಶ್ವಾಸದಿಂದಲೇ ಬದುಕುವ ಹಾಗೆ, ನನಗೆ ಕೃಪೆಯನ್ನು ಕೊಡು. ಈ ಲೋಕದಲ್ಲಿ ನಾನು ಪರವಾಸ ಮಾಡುವ ಪರ್ಯಂತರ, ಆತ್ಮದಿಂದ ನಿನ್ನನ್ನು ಹಾರೈಸಿ, ನೀನು ಭಕ್ತರಿಗೆ ಸಿದ್ಧ ಮಾಡುವ ರಾಜ್ಯವನ್ನು ಧ್ಯಾನಿಸಿ, ಪರಲೋಕಕ್ಕೆ ಯೋಗ್ಯವಾದ ಗುಣ ನಡತೆಗಳನ್ನು ಭೂಲೋಕದಲ್ಲಿಯೂ ಕೈಕೊಳ್ಳುವ ಹಾಗೆ, ನಿನ್ನ

ಪ್ರೀತಿಯ ಆಸಕ್ತಿಯನ್ನು ನನ್ನಲ್ಲಿ ಹೆಚ್ಚಿಸು. ಈ ಜೀವದ ಶ್ರ
ಮೆಗಳಿಂದಲೂ ಸೈತಾನನ ಶೋಧನೆಗಳಿಂದಲೂ ನಾನು ದ
ಣಿಯದ ಹಾಗೆ, ಬಿತ್ತುವ ಕಷ್ಟವನ್ನು ಪೈರಿನ ಆಲೋಚನೆ
ಯಿಂದ ಮುಚ್ಚುವ ಒಕ್ಕಲಿಗನಂತೆ, ಇಹ ಉಪದ್ರಗಳ ಮ
ಧ್ಯದಲ್ಲಿ ಸಂತೋಷದಿಂದಿರುವ ಹಾಗೆ, ಪರಲೋಕದ ಪ್ರ
ತ್ಯಾಶೆಯನ್ನು ನನ್ನಲ್ಲಿ ಬಲಗೊಳ್ಳಿಸು. ಸಾಯುವ ಸಮಯ
ದಲ್ಲಿ ನನಗೋಸ್ಕರ ನೀನು ತಾಳಿದ ಶ್ರಮೆ ಮರಣಗಳನ್ನು
ನೆನಸಿ, ವಿಶ್ವಾಸವನ್ನು ಕೈಕೊಂಡು, ನಾನು ಸತ್ತರೂ ಮೃತಿ
ಯನ್ನು ನೋಡದ ಹಾಗೆ, ನನಗೆ ಸಹಾಯ ಮಾಡು. ನನ
ಗೋಸ್ಕರವೂ ಲೋಕಕ್ಕೋಸ್ಕರವೂ ಕ್ರೂಜೆ ತಾಳಿ, ನಮ್ಮ
ನೀತಿಗೋಸ್ಕರ ಪುನರುತ್ಥಾನವಾಗಿ, ನಮ್ಮ ಮಹಿಮೆಗೋಸ್ಕ
ರ ನಿತ್ಯಮಹಿಮೆಯಲ್ಲಿ ಶೇರಿದವನಾದ ನನ್ನ ರಕ್ಷಕನೇ, ನಿನ್ನ
ಪರಿಶುದ್ಧ ನಾಮಕ್ಕೆ ಯುಗಯುಗಾಂತರಗಳ ವರೆಗೂ ಸ್ತೋ
ತ್ರ ಉಂಟಾಗಲಿ. ಆಮೆನ್.



# ಪೀಠಿಕೆ.

ಈ ಪುಸ್ತಕದಲ್ಲಿರುವ ಚಿತ್ರಗಳು ದೇವರ ಆಲಯವಾಗಿರುವ ಹೃದಯವನ್ನೂ ಸೈತಾನನ ವಾಸಸ್ಥಳವಾದ ಹೃದಯವನ್ನೂ ಬೇರೆ ಬೇರೆಯಾಗಿ ತೋರಿಸುತ್ತವೆ.

ಹತ್ತು ವಿಧದ ಚಿತ್ರಗಳು ಉಂಟು. ಒಂದೊಂದರಲ್ಲಿ ಒಂದು ಮುಖವು ಒಂದು ಹೃದಯವು ಬರದದೆ.

ಮನುಷ್ಯನ ಮುಖವನ್ನು ಬುದ್ಧಿಯಿಂದ ದೃಷ್ಟಿಸಿ ನೋಡಿದರೆ, ಅವನ ಸುಗುಣ ದುರ್ಗುಣಗಳನ್ನು ಸ್ವಲ್ಪವಾದರೂ ಊಹಿಸ ಬಹುದು. ಆದರೆ ಮನುಷ್ಯನ ಹೃದಯವನ್ನು ಮನುಷ್ಯನು ನೋಡಲಾರನು. ಹೃದಯವನ್ನು ಹಲಸಿನ ಹಣ್ಣಿನ ಹಾಗೆ ಬಿಚ್ಚಿ ನೋಡ ಕೂಡದು.

ದೇವರ ವಾಕ್ಯದಲ್ಲಿ ಹೃದಯದ ಎರಡು ವಿಧವಾದ ಗುಣಗಳು ಚನ್ನಾಗಿ ವರ್ಣಿಸಿ ಅವೆ. ದೇವರ ವಾಕ್ಯವನ್ನು ಓದಿ ಅಭ್ಯಾಸ ಮಾಡುವದರಿಂದ, ಮನುಷ್ಯನ ಹೃದಯದ ಭಾವವನ್ನು ಸತ್ಯದ ಪ್ರಕಾರ ತಿಳುಕೊಳ್ಳುವದು ಬಹಳ ಉ



